ಉಪನ್ಯಾಸಗ್ರಂಥಮಾಲೆ

೧೦

# ಮೂಢನಂಬಿಕೆಗಳು

ಎಲ್. ಆರ್. ಹೆಗಡೆ, ಎಂ. ಎ.



ಕರ್ನಾಟಕ ವಿಶ್ವವಿದ್ಯಾಲಯ

ಧಾರವಾಡ

೧೯೫೭

ಪ್ರಕಾಶಕರು:

ಎಮ್. ಎಸ್. ಬಗಲಿ, ಬಿ. ಎ., ಎಲ್ ಎಲ್. ಬಿ.
ರಜಿಸ್ಟ್ರಾರ್
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಮೊದಲನೆಯ ಮುದ್ರಣ

೨,೦೦೦ ಪ್ರತಿಗಳು

**ಬೆಲೆ: ೪ ಆಣೆ**

ಮುದ್ರಕರು:

ಕೆ. ಜಿ. ಮತ್ತು ಎ. ಎಸ್. ಜಠಾರ
ಕರ್ನಾಟಕ ಪ್ರಿಂಟಿಂಗ ವರ್ಕ್ಸ, ಧಾರವಾಡ

# ಮಾಲೆಯ ಮುನ್ನುಡಿ

ಕರ್ನಾಟಕ ವಿಶ್ವವಿದ್ಯಾಲಯದ ವ್ಯಾಸಂಗ ವಿಸ್ತರಣ ಸಮಿತಿಯು ಸಿದ್ಧಪಡಿಸಿದ ಯೋಜನೆಯ ಮೇರೆಗೆ ಮೊದಲನೆಯ ಉಪನ್ಯಾಸಮಾಲೆ ೧೯೫೭ ನೆಯ ನವಂಬರ್ ತಿಂಗಳಲ್ಲಿ ಗದಗಿನಲ್ಲಿ ನೆರವೇರಿತು. ವಿಶ್ವವಿದ್ಯಾಲಯದ ಮತ್ತು ಇದಕ್ಕೆ ಸೇರಿದ ಕಾಲೇಜುಗಳ ಪ್ರಾಧ್ಯಾಪಕರು ಸಾಹಿತ್ಯ, ವಿಜ್ಞಾನ, ಸಾಮಾಜಿಕಶಾಸ್ತ್ರ ಮೊದಲಾದ ಶಾಖೆಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಆಯ್ದುಕೊಂಡು ಶಾಸ್ತ್ರಸಮ್ಮತವಾದ ಸರಣಿಯಲ್ಲಿ, ಜನಸಾಮಾನ್ಯಕ್ಕೆ ತಿಳಿಯುವ ಶೈಲಿಯಲ್ಲಿ ಉಪನ್ಯಾಸಗಳನ್ನು ಕನ್ನಡದಲ್ಲಿ ಕೊಟ್ಟರು. ವಿಶ್ವವಿದ್ಯಾಲಯದ ಜ್ಞಾನ ಭಂಡಾರವನ್ನು ಕಾಲೇಜು ವರ್ಗಗಳಿಗೇ ಮೀಸಲಾಗಿ ಇಡದೆ ಅದರ ಅಲ್ಪಾಂಶವನ್ನಾದರೂ ಪುರಜನರ ಮನೆಬಾಗಿಲಿಗೆ ಒಯ್ದು ಮುಟ್ಟಿಸಬೇಕೆಂದು ಮಾಡಿದ ಈ ಪ್ರಯತ್ನಕ್ಕೆ ನಮ್ಮ ನಿರೀಕ್ಷೆಗೆ ಮೀರಿದ ಮೆಚ್ಚಿಕೆಯೂ ಪ್ರೋತ್ಸಾಹವೂ ದೊರೆತುವು. ಅಂದು ಗದಗಿನಲ್ಲಿ ಪ್ರಾರಂಭಿಸಿದ ಉಪನ್ಯಾಸಮಾಲೆ ಈಚೆಗೆ ಉತ್ತರಕರ್ನಾಟಕದ ಹಲವು ಊರುಗಳಲ್ಲಿ ನಡೆದಿದೆ, ಮುಂದೆಯೂ ನಡೆಯಲಿದೆ. ಇದು ನಮ್ಮ ವಿಶ್ವವಿದ್ಯಾಲಯದ ಪ್ರತಿ ತಿಂಗಳ ಕಾರ್ಯಕ್ರಮವಾಗಿ ಪರಿಣಮಿಸಿದೆ.

ಇಂಥ ಉಪನ್ಯಾಸಗಳನ್ನು ವಿದ್ವಾಂಸರ ಮುಖದಿಂದ ಪ್ರತ್ಯಕ್ಷವಾಗಿ ಕೇಳುವ ಜನರಿಗೆ ಆಸಕ್ತಿಯೂ ತಿಳಿವಳಿಕೆಯೂ

ಹೆಚ್ಚುವುದು ಸಹಜ. ಆದರೆ ಉಪನ್ಯಾಸದ ಮಾತು ಕೇಳಿದ ಕಿವಿಯಲ್ಲೇ ಕರಗಿಹೋಗುತ್ತದೆ; ಕೆಲವು ಕಾಲ ಕಳೆದ ಬಳಿಕ ಉಪನ್ಯಾಸದ ವಿವರಗಳನ್ನು ನೆನಪಿಗೆ ತಂದುಕೊಳ್ಳುವುದು ಸಭೆಯಲ್ಲಿದ್ದವರಿಗೇ ಅಶಕ್ಯವಾಗುತ್ತದೆ. ಬೇರೆ ಊರಿನವರಂತೂ ಇವುಗಳ ಲಾಭವನ್ನು ಪಡೆಯುವ ಹಾಗೆಯೇ ಇಲ್ಲ. ಆದಕಾರಣ ಉಪನ್ಯಾಸಗಳನ್ನು ಕೊಡಿಸಿದಷ್ಟಕ್ಕೇ ತೃಪ್ತಿಗೊಳ್ಳದೆ, ಇವುಗಳಲ್ಲಿ ಕೆಲವನ್ನಾದರೂ ಗ್ರಂಥರೂಪದಲ್ಲಿ ಬರೆಯಿಸಿ, ಸುಲಭವಾದ ಬೆಲೆಗೆ ಪ್ರಕಟಿಸಿ, ಕನ್ನಡ ಜನದಲ್ಲೆಲ್ಲ ಹರಡಬೇಕೆಂಬ ಸೂಚನೆ ಸಹಜವಾಗಿಯೇ ಬಂದಿತು. ಇದನ್ನು ವಿಶ್ವವಿದ್ಯಾಲಯದ ಪ್ರಕಟನ ಸಮಿತಿ ಉತ್ಸಾಹದಿಂದ ಅಂಗೀಕರಿಸಿತು. ಈ ಬಗೆಯ ಪ್ರಯತ್ನ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಹಿಂದೆಯೇ ನಡೆದು ಇಂಥದೊಂದು ಗ್ರಂಥಮಾಲೆ ಅಲ್ಲಿ ಜನಪ್ರಿಯವಾಗಿ ಪರಿಣಮಿಸಿದ ಸಂಗತಿ ನಮ್ಮ ಸಂಕಲ್ಪಕ್ಕೆ ಮತ್ತಷ್ಟು ಹುರುಪನ್ನು ಕೊಟ್ಟಿತು. ಹೀಗೆ ವಿಶ್ವವಿದ್ಯಾಲಯದ ಜನತಾಶಿಕ್ಷಣಕಾರ್ಯವು ಈ 'ಉಪನ್ಯಾಸ ಗ್ರಂಥಮಾಲೆ'ಯ ಮೂಲಕ ಇನ್ನೊಂದು ಹೆಜ್ಜೆಯನ್ನು ಮುಂದಕ್ಕೆ ಇರಿಸಿದೆ.

ನಮ್ಮ ಪ್ರಾರ್ಥನೆಗೆ ಮನ್ನಣೆಕೊಟ್ಟು, ಪ್ರತಿಫಲದ ಅಪೇಕ್ಷೆ ಇಲ್ಲದೆಯೆ, ಉಪನ್ಯಾಸಕರು ಪುಸ್ತಕಗಳನ್ನು ಬರೆದು ಕೊಡುತ್ತಿರುವುದು ಶ್ಲಾಘ್ಯವಾದ ವಿಷಯ; ಇದಕ್ಕಾಗಿ ಈ ಲೇಖಕ ಮಹಾಶಯರಿಗೆ ವಿಶ್ವವಿದ್ಯಾಲಯದ ವಂದನೆಗಳನ್ನು ಸಂತೋಷದಿಂದ ಸಲ್ಲಿಸುತ್ತೇನೆ. ಈ 'ಉಪನ್ಯಾಸ ಗ್ರಂಥ

ಮಾಲೆ' ಕನ್ನಡಿಗರ ಪ್ರೀತಿಗೆ ಪಾತ್ರವಾಗಲೆಂದೂ ಇದರ ಪ್ರಕಾಶನದಿಂದ ನಮ್ಮ ಜನತೆಯ ಜ್ಞಾನಾಸಕ್ತಿ ಪುಷ್ಟಿಗೊಳ್ಳಲೆಂದೂ ಹಾರೈಸುತ್ತೇನೆ.

**ಡಿ. ಸಿ. ಪಾವಟೆ**
ಉಪಕುಲಪತಿ
ಕರ್ನಾಟಕ ವಿಶ್ವವಿದ್ಯಾಲಯ

ಧಾರವಾಡ
೧-೧-೧೯೫೫

# ಅರಿಕೆ

ಈ ಪುಟ್ಟ ಪುಸ್ತಕದಿಂದ ಮೂಢನಂಬಿಕೆಗಳನ್ನು ಸಂಪೂರ್ಣ ಹೊಡೆದುಹಾಕಿರುವೆನೆಂಬ ಮೂಢನಂಬಿಕೆ ನನಗಿಲ್ಲ. ಮೂಢ ನಂಬಿಕೆಗಳನ್ನು ತೆಗೆದುಹಾಕುವೆನೆಂಬಲ್ಲಿಯೇ ಮೂಢನಂಬಿಕೆ ಯಿಡೆಯೆಂದು ತತ್ವಜ್ಞಾನಿ ಬೇಕನ್ ಹೇಳಿರುತ್ತಾನೆ. ಎಲ್ಲ ಜನರೂ ತಮಗೆ ಕಾಣದ ಭಾಗಗಳನ್ನು ಅಂದರೆ ಮೂಢನಂಬಿಕೆ ಗಳನ್ನು ಹೊಂದಿದ್ದಾರೆಂದು ಹರಟೆಯ ಮಲ್ಲ ಚಾರ್ಲಸ್ ಲ್ಯಾಂಬನ ಅಭಿಪ್ರಾಯ.

ಮೂಢನಂಬಿಕೆಗಳು ರೋಗದ ಹಾಗೆ ಎಂದು ನನ್ನ ಅಭಿ ಪ್ರಾಯ. ಅವು ಇದ್ದರೂ ಆದಷ್ಟು ಕಡಿಮೆ ಮಾಡಿಕೊಳ್ಳಲು ಯತ್ನಿಸುವುದಗತ್ಯ ಕೆಲ ಸಲ. ಅವು ನೋಂಕು ರೋಗಗಳ ಹಾಗೆ ಇತರರಿಂದ ಬಂದು ಸೇರುತ್ತವೆ. ಹಾಗೆ ಬಂದಾಗ ಜ್ಞಾನ ವೈದ್ಯರ ಸಹಾಯದಿಂದಲೂ ಪುಸ್ತಕೌಷಧಗಳ ಸೇವನದಿಂದಲೂ ಆ ರೋಗಗಳನ್ನು ನಿವಾರಿಸಿಕೊಳ್ಳಬಹುದು. ಕೆಲ ಸಲ ಸಾಧಾರಣ ಮೂಢನಂಬಿಕೆಗಳಿಂದ (ಯಾಕಂದರೆ ಬಹಳ ಅಪಾಯಕಾರಿಗಳಲ್ಲದ ಎಷ್ಟೋ ಮೂಢನಂಬಿಕೆಗಳಿವೆ) ಮನ ಸ್ಸಿಗೆ ಒಂದು ಬಗೆಯ ವಿಶ್ರಾಂತಿ, ತಾತ್ಕಾಲಿಕ ಸಮಾಧಾನ ಸಿಗಬಹುದು. ಆದರೂ ಅವನ್ನು ಕಳಕೊಳ್ಳುವುದರಲ್ಲಿಯೇ ಮನಸ್ಸಿನ ಆರೋಗ್ಯವಿದೆ.

ಮೂಢನಂಬಿಕೆಗಳೆಂದರೇನು? ಸತ್ಯವಲ್ಲದ ಸಂಗತಿ ಗಳನ್ನು ಸತ್ಯವೆಂದು ತಿಳಿಯುವುದೆಲ್ಲ ಮೂಢನಂಬಿಕೆಗಳೇ. ಬರ್ಟ್ರಾಂಡ್ ರಸೆಲ್ಲರು ಹೇಳುವಂತೆ ಜೀವನದ ಎಲ್ಲ ಕ್ಷೇತ್ರ

ಗಳಲ್ಲಿಯೂ ಅವು ಇರುತ್ತವೆ. ಅನೇಕ ಹಗಲುಗನಸುಗಳು ಮೂಢನಂಬಿಕೆಗಳೇ ಸರಿ. ಸಾಮಾನ್ಯ ಪ್ರಣಯಿಯು ತನ್ನ ನಲ್ಲೆಯು ಉಳಿದೆಲ್ಲ ಸ್ತ್ರೀಯರಿಗಿಂತ ಚೆಲುವೆಯೆಂದು ತಿಳಿಯುವುದು, ಕಾಗುಣಿತದ ಕವಿಯು ತಾನು ಕಾಲಿದಾಸನೆಂದು ತಿಳಿಯುವುದು, ( ಆದರೆ ಕುರುಬನು ದೇವಿಯ ವರದಿಂದ ಕಾಲಿದಾಸನಾದನೆಂಬುದು ಮೂಢನಂಬಿಕೆ ) ಮುಂತಾದ ಹಗಲುಗನಸುಗಳನ್ನು ಇಲ್ಲಿಯ ಅಭ್ಯಾಸದಲ್ಲಿ ಮೂಢನಂಬಿಕೆಗಳೆಂದು ತೆಗೆದುಕೊಂಡಿಲ್ಲ. ಬೇರೆಬೇರೆ ಜನಾಂಗಗಳಲ್ಲಿ ವಾಡಿಕೆಯಲ್ಲಿದ್ದ ಅಲ್ಲದೆ ಈಗಲೂ ಇರುವ ಸಾಮಾಜಿಕ ಧಾರ್ಮಿಕ ಆಚಾರ ವಿಚಾರಗಳಲ್ಲಿ ಸತ್ಯಕ್ಕೆ ವಿರುದ್ಧವೆಂದು ವಿಜ್ಞಾನದೃಷ್ಟಿಗೆ ಕಂಡುಬರುವ ಮೂಢನಂಬಿಕೆಗಳನ್ನು ಇಲ್ಲಿ ವಿವೇಚಿಸಿದೆ. ಅಸಂಭಾವ್ಯವಾದರೂ ಹಿರಿದಾಗಿರುವ ಆದರ್ಶಗಳೂ ಅಗೋಚರನಾದ ಪರಮಾತ್ಮನೂ ನನ್ನ ದೃಷ್ಟಿಯಲ್ಲಿ ಮೂಢನಂಬಿಕೆಗಳಲ್ಲ. ಹಾಗೆಯೇ ಭಾರತದ ಯೋಗವಿಚಾರವೂ ವಿಜ್ಞಾನಪರೀಕ್ಷೆಗೆ ಒಳಪಡಲಿಲ್ಲ ಎಂದೆನಿಸಿದುದರಿಂದ ಅದನ್ನು ಈ ನಿರೀಕ್ಷಣೆಯಲ್ಲಿ ಬಿಟ್ಟಿದ್ದೇನೆ. ದೂರಭಾವನಾ ಪ್ರಸಾರ ( telipathy ) ಹಾಗೂ ವಿಚಾರ ಪ್ರಸಾರ ( thought transcendence ) ಇವುಗಳನ್ನು ಕೆಲ ವೈಜ್ಞಾನಿಕ ದೃಷ್ಟಿಯುಳ್ಳವರು ಒಪ್ಪುತ್ತಿದ್ದರೂ ಇವು ಇನ್ನೂ ಅನಿರ್ಣೀತವೆಂದು ತಿಳಿಯುತ್ತೇನೆ. "ವೈಜ್ಞಾನಿಕ ಪರಿಶೀಲನೆಯ ಕ್ಷೇತ್ರದೊಳಗೆ ಹೊಸದಾಗಿ ಉದ್ಭೂತವಾದ ನಿರೀಕ್ಷೆಗಳ ಮೂಲಕ ಹೊಸ ಹೊಸ ಮೂಢನಂಬಿಕೆಗಳ ಉಗಮವಾಗಲು ಸಾಧ್ಯವಿದೆ". ಆದಕಾರಣ ಇಂಥ ವಿಷಯಗಳು ಹೆಚ್ಚಾಗಿ ವೈಜ್ಞಾನಿಕ ನಿರೀಕ್ಷಣೆಗೆ ಒಳಪಡಬೇಕಾಗಿದೆ.

ಕಳೆದ ನವಂಬರದಲ್ಲಿ ಕುಂದಗೋಳದಲ್ಲಿ ಜರುಗಿದ ಕರ್ನಾಟಕ

ವಿಶ್ವವಿದ್ಯಾಲಯದ ವ್ಯಾಸಂಗ ವಿಸ್ತರಣ ಉಪನ್ಯಾಸ ಮಾಲೆಯ ಕಾರ್ಯಕ್ರಮದಲ್ಲಿ ಈ ವಿಷಯದ ಮೇಲೆ ಭಾಷಣ ಮಾಡಲು ನನ್ನನ್ನು ಆಮಂತ್ರಿಸಿ ಈಗ ಇದನ್ನು ಪುಸ್ತಕರೂಪವಾಗಿ ಪ್ರಕಟಿಸುತ್ತಿರುವ ಕ. ವಿ. ವಿದ್ಯಾಲಯದ ಅಧಿಕಾರಿಗಳಿಗೆ ನಾನು ನನ್ನ ಕೃತಜ್ಞತೆಗಳನ್ನು ಸಮರ್ಪಿಸುತ್ತೇನೆ.

ವ್ಯಾಖ್ಯಾನಗಳನ್ನು ಕೇಳಲು ಅಧಿಕ ಸಂಖ್ಯೆಯಲ್ಲಿ ಬಂದ ಕುಂದಗೋಳದ ನಾಗರಿಕರು ತೋರಿದ ವಿಶ್ವಾಸ, ಹಾಗೂ ನೀಡಿದ ಮನ್ನಣೆಗಳನ್ನು ಈ ಲೇಖಕನು ಸಂತೋಷದಿಂದ ನೆನೆಯುತ್ತಾನೆ.

ಈ ಪುಸ್ತಕದ ಬರೆವಣಿಗೆಯಲ್ಲಿ ಸಲಹೆ, ಸೂಚನೆ ಪ್ರೋತ್ಸಾಹನಗಳನ್ನು ಕೊಟ್ಟು ಇದು ಅಚ್ಚಾಗುವುದರಲ್ಲಿ ವಿಶೇಷ ಆಸ್ಥೆ ತೋರಿದ ವಿಶ್ವವಿದ್ಯಾಲಯದ ಶ್ರೀ. ಚೆನ್ನವೀರ ಕಣವಿಯವರಿಗೆ ನಾನು ವಿಶೇಷ ಕೃತಜ್ಞನಾಗಿದ್ದೇನೆ.

ಕೊನೆಯದಾಗಿ, ಪುಸ್ತಕ ರಚನೆಯಲ್ಲಿ ನೆರವಾದ ಅನೇಕ ಗ್ರಂಥಗಳಿಗೆ ಕೃತಜ್ಞನಾಗಿದ್ದೇನೆ. ಹೆಚ್ಚಾಗಿ ಇಲ್ಲಿನ ಲೇಖಕ ಸಂಗ್ರಹಕಾರನು ಪೂಜ್ಯ ಬಿ. ಎಂ. ಶ್ರೀ.ಯವರು ಹೇಳಿದಂತೆ "........ಆತನು ಆಗಾಗ್ಗೆ ಧರ್ಮಸಂಕಟಕ್ಕೆ ಸಿಕ್ಕದೆ ಇರಲಾರನು........ಕೊನೆಗೆ ಸಹೃದಯರ ಕರುಣೆಗೆ ಸಂಗ್ರಹಕಾರನು ಶರಣನು."

ದಿನಾಂಕ
೧೦-೨-೧೯೫೭

**ಎಲ್. ಆರ್. ಹೆಗಡೆ**
ಕೆನರಾ ಕಾಲೇಜ, ಕುಮಟಾ

# ಮೂಢನಂಬಿಕೆಗಳು

There remains and to spare of deeper mystery. The mystery of Nature needs no superstition.

—Sir Charles Sherington

ಜಗತ್ತಿನ ಕುರಿತು, ಮನುಷ್ಯನ ಜೀವನದ ಕುರಿತು ಸಕಾರಣವಾದ ವಿಚಾರದ ಆಧಾರವಿಲ್ಲದೆ ಪ್ರಚಲಿತವಾದ ಅನೇಕ ಕಲ್ಪನೆ, ಭಾವನೆ, ಆಚರಣೆಗಳು ಮೂಢನಂಬಿಕೆಗಳು. ನೈಸರ್ಗಿಕವಾದ ಘಟನೆಗಳಿಗೆ ಅತೀಂದ್ರಿಯವಾದ ಶಕ್ತಿಯ ಪ್ರಭಾವವನ್ನು ಆರೋಪಿಸುವುದು ಅವುಗಳ ಪ್ರಧಾನ ಲಕ್ಷಣ. ಗ್ರಹಣಗಳಲ್ಲಿ ರಾಹು-ಕೇತುಗಳು ಸೂರ್ಯ-ಚಂದ್ರರನ್ನು ನುಂಗುವವೆಂದು ತಿಳಿಯುವುದು, ಧೂಮಕೇತು ಕಂಡರೆ ರಾಜ್ಯಕ್ರಾಂತಿ, ಯುದ್ಧ, ಬಿರುಗಾಳಿ, ದೊಡ್ಡ ಮನುಷ್ಯರ ಮರಣಗಳು ಸಂಭವಿಸುವ ಸೂಚನೆಯೆಂದು ತಿಳಿಯುವುದು ಮೂಢನಂಬಿಕೆ. ಪರಸ್ಪರ ಸಂಬಂಧವಿಲ್ಲದ ವಸ್ತುಗಳಲ್ಲಿ ಸಂಬಂಧ ಕಲ್ಪಿಸಿ ಅವುಗಳಿಗೆ ಕೆಲವು ಕಲ್ಪಿತ ಪರಿಣಾಮಗಳನ್ನು ಆರೋಪಿಸುವುದು ಮೂಢನಂಬಿಕೆ. ಹಲ್ಲಿ ತನ್ನಷ್ಟಕ್ಕೆ ಲೊಚಗುಟ್ಟುತ್ತದೆ. ಆದರೆ ಅದಕ್ಕೆ ಸುತ್ತಲಿನ ಜನದ ಒಳಿತು-ಕೆಡಕುಗಳನ್ನು ಸೂಚಿಸುವ ವಿಶೇಷಾರ್ಥ ಕಲ್ಪಿಸುವುದು ಮೂಢನಂಬಿಕೆ.

ಅತಿ ಪುರಾತನ ಕಾಲದಿಂದ ಮಾನವನು ನಿಸರ್ಗವನ್ನು ತನಗೆ ಅನುಕೂಲವಾಗುವಂತೆ ಹೊಂದಿಸಿಕೊಂಡು ಬಾಳಲು ಪ್ರಯತ್ನವನ್ನು ಮಾಡುತ್ತಿದ್ದಾನೆ. ಅತಿ ಕಾಡುಸ್ಥಿತಿಯಲ್ಲಿದ್ದಾಗಿನಿಂದ ಕೆಲವು ಆಕಸ್ಮಿಕ ಘಟನೆಗಳಿಗೆ ಸಂಬಂಧಕಲ್ಪಿಸಿ ನೋಡಿ ತನ್ನ

ಅನುಭವದ ಮುದ್ರೆಯೊತ್ತಿ ಕೆಲವು ನಂಬಿಕೆಗಳನ್ನು ಮಾಡಿ ಕೊಂಡಿದ್ದನು. ಆ ಹಿಂದಿನ ನಂಬಿಕೆಗಳೆಲ್ಲ ಆಗಿದ್ದಂತೆಯೇ ಅಥವಾ ಅವೇ ನಂಬಿಕೆಗಳು ಈಗ ಇವೆಯೆಂದು ಹೇಳುವದು ಸಾಧ್ಯವಿಲ್ಲ. ಆದರೂ ಬಹಳ ಪ್ರಾಚೀನ ಕಾಲದಿಂದ ಮನುಷ್ಯನು ಅದೃಶ್ಯ ಶಕ್ತಿಗಳಲ್ಲಿ ನಂಬಿಕೆಯನ್ನು ಇಡುತ್ತ ಬಂದಿರುವನೆಂದು ಹೇಳಬಹುದು.

ಅಸಮರ್ಪಕಜ್ಞಾನವೇ ಮೂಢನಂಬಿಕೆಗಳ ತಳಹದಿ. ನಿಸರ್ಗದ ವಿವಿಧ ವ್ಯಾಪಾರಗಳ ಸಮರ್ಪಕ ಜ್ಞಾನವಿಲ್ಲದೆ ಇದ್ದರೂ ಪ್ರಾಚೀನ ಮಾನವನಿಗೆ ಆ ನಿಸರ್ಗದ ಅವಲಂಬನೆಯಿಂದಲೇ ಬದುಕಬೇಕಾಗಿತ್ತು. ಗುಡುಗು, ಸಿಡಿಲು, ಜಡಿಮಳೆ, ಬಿರುಗಾಳಿ, ಸೂರ್ಯೋದಯ, ಚಂದ್ರೋದಯ, ವಿವಿಧ ಪ್ರಾಣಿಗಳ ಜೀವನ-ಮರಣಗಳ ಹೋರಾಟ—ಅವುಗಳೊಡನೆ ಮಾನವಜಾತಿ ಸೆಣಸಿ, ಅವುಗಳ ಪರಿಣಾಮ ಅನುಭವಿಸಿ ಪಟ್ಟಪಾಡು, ಮಾನವ ಜೀವನದಲ್ಲಿಯ ಹುಟ್ಟು-ಸಾವು, ರೋಗ-ರುಜೆ, ಮುಪ್ಪು, ಮುಂತಾದ ವಿವಿಧ ಜೀವನವ್ಯಾಪಾರಗಳ ವಿಸ್ಮಯಜನಕ ಪ್ರಪಂಚ, ಆ ಜೀವನದಲ್ಲಿನ ಸಂತೋಷ, ದುಃಖ, ಭಯ, ಮತ್ಸರ, ಸಿಟ್ಟು, ದ್ವೇಷ ಇತ್ಯಾದಿ ತೀವ್ರ ಭಾವನೆಗಳ ಸೆಳವಿಗೆ ಸಿಕ್ಕ ಮಾನವನ ಮನಸ್ಸು ತನ್ನ ಹಾಗೂ ತನ್ನ ಪಂಗಡದ ರಕ್ಷಣೆಗಾಗಿ ಕೆಲ ಮಟ್ಟಿನ ವಿಚಾರ ಮಾಡಬೇಕಾಗಿತ್ತು.

ಶಕ್ತಿಯೇ ಜೀವನದ ಮೂಲ ಮಂತ್ರವಾಗಿತ್ತು. ಕಾಡು ಪ್ರಾಣಿಗಳೊಡನೆ, ಇತರ ಪಂಗಡಗಳೊಡನೆ ಹೋರಾಡಿ ಬದುಕಬೇಕಾಗಿದ್ದ ಪ್ರಾಚೀನ ಪಂಗಡಗಳವರು ತಮ್ಮ ದೈಹಿಕ ಶಕ್ತಿಯನ್ನು, ಆಯುಧಗಳ ಶಕ್ತಿಯನ್ನು ಅವಲಂಬಿಸಬೇಕಾಗಿತ್ತು. ನಿಸರ್ಗದ ಶಕ್ತಿಗಳು ಕೆಲಸಲ ಅನುಕೂಲವಾಗಿ, ಕೆಲ ಸಲ ಪ್ರತಿ

ಕೂಲವಾಗಿ ವ್ಯವಹರಿಸುತ್ತಿದ್ದವು. ಕಾಡುಪ್ರಾಣಿಗಳು ಕೆಲ ಮಾನವನಿಗಿಂತ ಹೆಚ್ಚು ಬಲಿಷ್ಠವಾಗಿ ಮನುಷ್ಯರನ್ನು ಸಂಹರಿಸುತ್ತಿದ್ದವು. ತಮ್ಮ ವೈರಿ ಪಂಗಡದವರನ್ನು ಕಾಣಿಕೆ, ಶರಣಾಗತಿ, ಸೇವೆ ಇತ್ಯಾದಿಗಳಿಂದ ಒಲಿಸಿಕೊಂಡಂತೆ, ನಿಸರ್ಗದ ಹಾಗೂ ಪ್ರಾಣಿಗಳ ಶಕ್ತಿಗಳನ್ನು ತಮಗೆ ಅನುಕೂಲವಾಗುವಂತೆ ತಿರುಗಿಸಿಕೊಳ್ಳಬಹುದೆಂದು ಅವರು ಯೋಚಿಸಿದರು.

ಮನುಷ್ಯರಲ್ಲಿ, ಇತರ ಪ್ರಾಣಿಗಳಲ್ಲಿ, ಹೊಸ ಜೀವಿಯ ಜನ್ಮವಾಗುವದೂ ಮರಣದಿಂದ ದೇಹ ನಿಷ್ಕ್ರಿಯವಾಗುವದೂ ಅದೃಶ್ಯ ಶಕ್ತಿಗಳ ಕುರಿತು ಇರುವ ನಂಬಿಕೆಗೆ ಪುಟಕೊಟ್ಟಿರಬೇಕು. ಆ ಶಕ್ತಿ ಬೇರೆ ಎಲ್ಲಿಯೋ ಹೋಗಿರಬೇಕೆಂದು ಸಹಜವಾಗಿಯೇ ಮಾನವ ತರ್ಕಿಸುತ್ತಾನೆ. ಇಂಥ ಅದೃಶ್ಯ ಶಕ್ತಿಗಳು ಜಗತ್ತಿನಲ್ಲೆಲ್ಲ ಇವೆಯೆಂದು ಆತ ಕಲ್ಪಿಸಿದರೆ ಆಶ್ಚರ್ಯವಿಲ್ಲ. ಮರ ಮುರಿದು ಬೀಳುವಾಗ ಮುರಿಯುವ ಶಬ್ದ ಅದರಲ್ಲಿದ್ದ ಅದೃಶ್ಯ ಶಕ್ತಿಯ ಕೂಗೆಂದು ಮಾನವ ಭಾವಿಸುವದು ಬಹು ಸ್ವಾಭಾವಿಕ. ನಿಸರ್ಗದ ಎಲ್ಲ ಶಕ್ತಿಗಳಲ್ಲಿಯೂ ಇಂಥ ಅದೃಶ್ಯ ಶಕ್ತಿಗಳ ಅಸ್ತಿತ್ವವನ್ನು ಮಾನವ ಕಲ್ಪಿಸಿದ. ನೆರಳುಗಳು, ಮೋಡಗಳ ವಿವಿಧ ಆಕಾರಗಳು ಕೆಲವೊಮ್ಮೆ ಈ ಅದೃಶ್ಯ ಶಕ್ತಿಗಳ ಆಕಾರಗಳು ಎಂದು ಆತ ತಿಳಿದಿರಬೇಕು. ಹೊಗೆಯಿಂದಲೂ ಅಂಥ ಭಾವನೆ ಸಾಧ್ಯವಿದೆ.

ಅಜ್ಞಾನದ ಮೂಲಕ ಮನುಷ್ಯನ ಭೀತಿ ನಾನಾತರದ ಕಲ್ಪನೆಗಳಿಗೆ ಎಡೆಕೊಡುತ್ತದೆ. ಸೂರ್ಯಗ್ರಹಣ, ಚಂದ್ರಗ್ರಹಣಗಳಲ್ಲಿ ಸೂರ್ಯ, ಚಂದ್ರರು ನಾಶವಾಗಿಹೋಗಬಹುದೆಂಬ ಭಯ ಅನೇಕ ಪ್ರಾಚೀನ ಜನಾಂಗಗಳಿಗಿದ್ದಿರಬೇಕು ಹಾಗಾದರೆ ಆಗುವ ಕಷ್ಟಗಳನ್ನು ತಪ್ಪಿಸಲು ಪ್ರಾಚೀನ

ಮಾನವ ತನ್ನದೇ ಆದ ಪ್ರಯತ್ನಗಳನ್ನು ಮಾಡಿರಬೇಕು. ಕೆಲ ಕಾಡು ಜನಾಂಗಗಳವರು ಸೂರ್ಯಗ್ರಹಣದಲ್ಲಿ ಸೂರ್ಯನು ನಂದಿದರೂ ಪುನಃ ಹೊತ್ತಿಕೊಳ್ಳಲೆಂದು ಬಾಣಗಳಿಗೆ ಬೆಂಕಿ ಯನ್ನು ಕಟ್ಟಿ ಮೇಲೆ ಬಿಡುತ್ತಾರೆ. ಸುಮಾತ್ರಾದಲ್ಲಿ ಗ್ರಹಣ ದಲ್ಲಿ ಸೂರ್ಯಚಂದ್ರರು ಪರಸ್ಪರ ನುಂಗುವದನ್ನು ತಪ್ಪಿಸಲು ಭೇರಿಗಳನ್ನು ಬಡಿದು ದೊಡ್ಡ ಶಬ್ದ ಮಾಡುತ್ತಾರೆ. ಬಿರುಗಾಳಿ ಬಂದಾಗ ಕೋಲಿನಿಂದ ಬಡಿದು ಅದನ್ನು ನಿಲ್ಲಿಸಲು ಕೆಲಪಂಗಡ ಗಳವರು ಪ್ರಯತ್ನ ಮಾಡುತ್ತಾರೆ. ಹೀಗೆ ಮಾಡುವದರಿಂದ ಕಷ್ಟಗಳನ್ನು ತಪ್ಪಿಸಿಕೊಳ್ಳುವೆವೆಂದಾಗಲಿ ಅನಿಷ್ಟ ಕಡಿಮೆ ಯಾಗುವದೆಂದಾಗಲಿ ಅನಾಗರಿಕ ಜನರು ತಿಳಿದಿದ್ದಿರಬೇಕು. ಬೌದ್ಧಿಕ ದೃಷ್ಟಿಯಿಂದ ಎಷ್ಟೋ ವಿಷಯಗಳಲ್ಲಿ ಬಾಲ್ಯಾವಸ್ಥೆ ಯಲ್ಲಿದ್ದ ಪ್ರಾಚೀನ ಮಾನವ ತನ್ನ ಇಂಥ ಕ್ರಮಗಳಿಂದ ತಾನು ನಿಸರ್ಗವನ್ನು ನಿಯಂತ್ರಣದಲ್ಲಿಟ್ಟುಕೊಳ್ಳಬಲ್ಲೆನೆಂದು ( ಬಾಲ ಕರು ನಂಬಿ ನಟಿಸುವ ಹಾಗೆ ) ನಂಬಿ ಅನೇಕ ಮಾಟಗಳನ್ನು ಕಲ್ಪಿಸಿಕೊಂಡಿರಬೇಕು.

ಪ್ರಾಚೀನ ಮಾನವನ ಪದ್ಧತಿಗಳನ್ನು ಬಹುಮಟ್ಟಿಗೆ ಉಳಿಸಿ ಕೊಂಡ ಕಾಡು ಜನಾಂಗಗಳ ಆಚರಣೆಯಿಂದ ಅವರ ಪ್ರಾಚೀನ ಜೀವನದ ಕಲ್ಪನೆಯನ್ನು ಕೆಲಮಟ್ಟಿಗೆ ಮಾಡಿ ಕೊಳ್ಳಬಹುದು ಅನೇಕ ನಂಬಿಕೆಗಳನ್ನು ಅವರು ತಮ್ಮ ಅನೇಕ ಸಾಂಘಿಕವಾದ ಚಟುವಟಿಕೆಗಳಲ್ಲಿ ಆಚರಣೆ ಮಾಡುತ್ತಾರೆ. ಮಾಟದಿಂದ ನಿಸರ್ಗದ ಶಕ್ತಿಗಳನ್ನು ತಮಗನುಕೂಲವಾಗಿ ಪರಿವರ್ತಿಸಿಕೊಳ್ಳುವ ಅಥವಾ ಅವನ್ನು ಬೆದರಿಸಿ ಅವುಗಳಿಂದಾ ಗುವ ಅಪಾಯವನ್ನು ತಪ್ಪಿಸಿಕೊಳ್ಳುವ ಹಲವು ಆಚರಣೆಗಳಿವೆ. ವೈರಿಗಳನ್ನು ನಾಶಮಾಡಲೂ ಮಾಟ, ಮೋಡಿಗಳನ್ನು ಉಪ

ಯೋಗಿಸುತ್ತಾರೆ. ಮಾಟಗಳನ್ನು ಮಾಡಿ ಭೂತಗಳನ್ನು ಉಚ್ಚಾಟನೆ ಮಾಡುವ, ಅವುಗಳನ್ನು ಇತರರ ಮೇಲೆ ಬಿಡುವ ಕ್ರಮಗಳನ್ನು ಪಂಗಡದಲ್ಲಿ ಕೆಲ ವಿಶಿಷ್ಟ ಜನರು ಅನುಸರಿಸಿ ಸಮಾಜದಲ್ಲಿ ತುಂಬಾ ಮಹತ್ವವನ್ನು ಹೊಂದುತ್ತಿದ್ದರು. ಅನೇಕ ಕಡೆಗಳಲ್ಲಿ ರಾಜನೇ ಇಂಥ ಭೂತವೈದ್ಯ, ಅಥವಾ ಪುರೋಹಿತನಾಗಿರುತ್ತಿದ್ದನೆಂದು ಸರ್ ಜೇಮ್ಸ್ ಫ್ರೇಸರರು ಹೇಳುತ್ತಾರೆ. ಈಗಲೂ ಮಾಟದ ಶಕ್ತಿಯ ಮೂಲಕವೇ ಮೆಲನೀಶಿಯಾ, ಉತ್ತರ ನ್ಯೂಲ ನದಿಯ ಪಂಗಡಗಳವರು ತಮ್ಮ ನಾಯಕನ ಆಯ್ಕೆ ಮಾಡುತ್ತಾರೆ.

ಮಾಟಗಳು ಎರಡು ಬಗೆಯವು. ಸಮಾನ ಪ್ರವೃತ್ತಿಕ ಹಾಗೂ ಸಾಂಸರ್ಗಿಕ. ಮೊದಲನೆಯದು ಸಮಾನವು ಸಮಾನದ ಗುಣವನ್ನು ಕೊಡುತ್ತದೆ ಎಂಬ ನಂಬಿಕೆಯಿಂದ ಪ್ರವೃತ್ತ ವಾದುದು. ಬ್ರಿಟಿಶ್ ಕೋಲಂಬಿಯಾದ ಇಂಡಿಯನರು ಸಮುದ್ರ ದಲ್ಲಿ ಮೀನುಗಳು ತಮ್ಮ ಪ್ರದೇಶದಲ್ಲಿ ಬಾರದಿದ್ದರೆ ಮೀನಿನ ಆಕಾರವನ್ನು ಮಾಡಿ ಸಮುದ್ರದಲ್ಲಿ ಬಿಡುವರು. ಅದರಿಂದ ಮೀನಗಳು ಅಲ್ಲಿ ಬರುವವೆಂದು ನಂಬುತ್ತಾರೆ. ಬಂಜೆ ಕಟ್ಟಿಗೆಯ ಗೊಂಬೆಯನ್ನು ತೊಡೆಯ ಮೇಲೆ ಇಟ್ಟುಕೊಳ್ಳುತ್ತಾಳೆ. ಬೋರ್ನಿಯೋದ ಡಯಾಕ ಜನರಲ್ಲಿ ಹಡೆಯುವ ಹೆಂಗಸು ಸುಲಭವಾಗಿ ಹಡೆಯಬೇಕೆಂದು ಅವಳಂತೆಯೇ ಅನುಕರಣ ಮಾಡುವ ವಿಧಾನವಿದೆ. ಒಳಗೆ ಅವಳ ಹತ್ತರ ಒಬ್ಬನು ಅವ ಳಂತೆಯೇ ಅಭಿನಯಿಸುತ್ತಾನೆ. ಹೊರಗೆ ಒಬ್ಬ ತನ್ನ ಹೊಟ್ಟೆಗೆ ದೊಡ್ಡ ಕಲ್ಲನ್ನು ವಸ್ತ್ರದಲ್ಲಿ ಸುತ್ತಿಕೊಂಡು ತನ್ನ ಸಂಗಡಿಗನು ಒಳಗಿನಿಂದ ತಿಳಿಸಿದ ಸೂಚನೆಯಂತೆ ತನ್ನ ನಟನೆಯ ಶಿಶು ವನ್ನು ನಿಜವಾದ ಶಿಶುವಿನಂತೆ ಚಲನೆ ಮಾಡಿಸುತ್ತಾನೆ. ಈ

ಕಲ್ಲಿನ ಶಿಶುವನ್ನು ತಿರುಗಿಸಿ ಕೆಳಕ್ಕೆ ತಂದು ಹೊರಗೆ ಬಿಟ್ಟರೆ ಬಸುರಿಯ ಶಿಶುವೂ ಹಾಗೆಯೇ ಕೆಳಗೆ ಬಂದು ಸುಲಭವಾಗಿ ಹಡೆಯುವಳೆಂದು ಕಲ್ಪಿಸಿ ಮಾಡುತ್ತಾರೆ.

ಜೋಡು ಬಾಳೇಹಣ್ಣು ತಿಂದರೆ ಅವಳಿ ಮಕ್ಕಳಾಗುವವೆಂಬ ಕಲ್ಪನೆ ನಮ್ಮಲ್ಲಿದೆ. ಗತಿಲಾಲೀಸ ಜನರಲ್ಲಿ ತನ್ನ ಪ್ರಿಯಕರಳನ್ನು ಸಂಧಿಸಲು ಹೋಗುವವನು ಅವಳ ಮನೆಯ ಚಪ್ಪರದ ಮೇಲೆ ಮಣ್ಣು ಹಾಕುವದರಿಂದ ಅವಳ ತಂದೆತಾಯಿ ಮಣ್ಣಿನ ಹಾಗೇ ನಿಶ್ಚೇತನರಾಗಿ ಎಚ್ಚರಹೊಂದುವದಿಲ್ಲವೆಂದು ತಿಳಿಯುತ್ತಾನೆ. ಸ್ಮಶಾನದ ಮಣ್ಣನ್ನು ಕಳ್ಳರು ಉಪಯೋಗಿಸುತ್ತಾರೆ.

ಒಂದು ಸಲ ಸಂಬಂಧ ಹೊಂದಿದ ವಸ್ತುಗಳು ಸಂಬಂಧ ತಪ್ಪಿದ ಮೇಲೆಯೂ ಸಂಬಂಧಪರಿಣಾಮವನ್ನು ತೋರಿಸುವವೆಂಬ ನಂಬಿಗೆಯಿಂದ ಸಾಂಸರ್ಗಿಕ ಮಾಟದ ಆಚರಣೆ ಮಾಡುತ್ತಾರೆ. ಮನುಷ್ಯನ ಹಲ್ಲು, ಕೂದಲು, ಉಗುರು, ತೆಗೆದು ಹಾಕಿದ ಮೇಲೆಯೂ ಅವುಗಳ ಮಾಟದ ಸಂಬಂಧ ಆತನಿಗೆ ಇದೆಯೆಂದು ತಿಳಿಯುತ್ತಾರೆ. ಈ ಮೂಢನಂಬಿಕೆ ಸಾರ್ವತ್ರಿಕವಾಗಿದೆ. ಇಂಗ್ಲಂಡದ ಸಸೆಕ್ಸ್ ಪ್ರಾಂತದಲ್ಲಿ ಚಿಕ್ಕಮಕ್ಕಳ ಬಿದ್ದ ಹಲ್ಲುಗಳನ್ನು ಒಗೆಯಬಾರದೆಂದು ಒಬ್ಬ ಹೆಂಗಸು ಬಲವಾಗಿ ಪ್ರತಿಪಾದಿಸುತ್ತಿದ್ದಳು. ಯಾವುದಾದರೂ ಪ್ರಾಣಿ ಅದನ್ನು ನುಂಗಿದರೆ ಹೊಸದಾಗಿ ಹುಟ್ಟುವ ಹಲ್ಲುಗಳು ಆ ಪ್ರಾಣಿಯ ಹಲ್ಲುಗಳ ಆಕಾರ ಹೊಂದುವವೆಂದು ಅವಳ ಹೇಳಿಕೆ. ಸಿಮನ್ಸ್ ಎಂಬವನಿಗೆ ಹಂದಿಯ ಹಲ್ಲುಗಳ ಹಾಗೆ ದೊಡ್ಡ ಹಲ್ಲು ಇದ್ದವಂತೆ. ಆತನ ತಾಯಿ ಹಂದಿಗಳ ಹಕ್ಕೆಯಲ್ಲಿ ಆತನ ಬಿದ್ದ ಹಲ್ಲನ್ನು ಒಗೆದ ಮೂಲಕವೇ ಆತನಿಗೆ ಅಂಥ ಹಲ್ಲು ಬಂದವಂತೆ. ಬಿದ್ದ ಹಲ್ಲುಗಳನ್ನು ಇಲಿಯ ಬಿಲದಲ್ಲಿ ಇಟ್ಟು

ಇಲಿ ಅದನ್ನು ನುಂಗಿದರೆ ಇಲಿಯ ಹಲ್ಲುಗಳಂಥ ಹರಿತ ಹಲ್ಲುಗಳು ಬರುವವೆಂದು ಜರ್ಮನಿಯಲ್ಲಿ ನಂಬಿಕೆಯಿದೆ. ನಮ್ಮ ಕಡೆ ಬಿದ್ದ ಹಲ್ಲುಗಳನ್ನು ತೆಂಗಿನ ಮರದ ರಂಧ್ರದಲ್ಲಿ ಇಡಬೇಕೆಂದು ಹೇಳುವದಕ್ಕೆ ಇಂಥದೇ ಕಾರಣ ಇರಬೇಕು. ಹೊಕ್ಕುಳ ನಾಳವನ್ನು ನೀರಿನಲ್ಲಿಟ್ಟರೆ ಮಾತ್ರ ಮುಂದೆ ಈಸಾಡಲು ಬರುವುದೆಂದು ಆಸ್ಟ್ರೇಲಿಯಾದ ಕೆಲ ಪಂಗಡಗಳ ನಂಬಿಗೆ. ಹೊಕ್ಕುಳ ನಾಳ ಹಾಳಾದರೆ ಅವನತಿ ಎಂಬ ಕಲ್ಪನೆ ಕೆಲವರಲ್ಲಿದೆ. ಹೊಕ್ಕುಳ ನಾಳ ಹುಗಿದ ಜಾಗದ ಬಗ್ಗೆ ಆತ್ಮೀಯತೆ ಪ್ರತಿಯೊಬ್ಬನಿಗಿರುತ್ತದೆಂದು ನಮ್ಮಲ್ಲಿ ನಂಬುತ್ತಾರೆ.

ಗಾಯವಾದರೆ ಗಾಯ ಮಾಡಿದ ಆಯುಧಕ್ಕೂ ಗಾಯವಾದ ಮನುಷ್ಯನಿಗೂ ಸಂಬಂಧ ಕಲ್ಪಿಸುತ್ತಾರೆ. ಯುರೋಪಿನಲ್ಲಿ ಕತ್ತಿಯಿಂದ ಗಾಯವಾದರೆ ಕತ್ತಿಗೆ ಚಿಕಿತ್ಸೆ ಮಾಡುತ್ತಿದ್ದುದಕ್ಕೂ ಇದೇ ಕಾರಣವಿರಬೇಕು, ಇಂಗ್ಲಂಡಿನ ಸಫ್ರೊಕ್ ಪ್ರಾಂತದಲ್ಲಿ ಇಂದಿಗೂ ಕತ್ತಿಯಿಂದ ಗಾಯವಾದರೆ ಗಾಯಕ್ಕೆ ರಸಿಕೆಯಾಗಬಾರದೆಂದು ಕತ್ತಿಯನ್ನು ತಿಕ್ಕಿ ಹೊಳಪು ಮಾಡುತ್ತಾರಂತೆ. ಆಸ್ಟ್ರೇಲಿಯಾ ಹಾಗೂ ಯುರೋಪಗಳಲ್ಲಿ ಒಬ್ಬನ ಹೆಜ್ಜೆಯ ಗುರುತಿಗೆ ಮೊಳೆ ಚುಚ್ಚಿದರೆ ಆತನಿಗೆ ಸಂಧಿವಾತವಾಗುವುದೆಂಬ ನಂಬಿಕೆಯಿದೆ.

## ನಿಸರ್ಗವ್ಯಾಪಾರ ನಿಯಂತ್ರಣ

ಇಂದಿಗೂ ಜಗತ್ತಿನ ಬಹುಭಾಗದ ಜನರು ಮಾಟದಲ್ಲಿ ನಂಬಿಗೆಯುಳ್ಳವರಾಗಿದ್ದಾರೆ. ಯುರೋಪಿನ ಕೆಲ ಅಜ್ಞಾನಿವರ್ಗದ ಜನರೂ ಅದಕ್ಕೆ ಅಪವಾದವಾಗಿಲ್ಲ. ಜನರ ಕ್ಷೇಮಸಾಧನೆಯಲ್ಲಿ ಮಳೆ ಸರಿಯಾಗಿ ನಡೆಸಿಕೊಡುವದು ಬಹಳ ಅಗತ್ಯವಾಗಿದೆ.

ಆದ್ದರಿಂದ ಮಳೆ ಬೀಳದಿದ್ದರೆ ಅನೇಕ ಮಾಟದ ವಿಧಾನ ನಡೆಸುವುದು ಎಲ್ಲ ಕಡೆ ಪ್ರಚಲಿತವಿದೆ. ರಶಿಯದ ಡೊರ್ಪಾಟ್ ಎಂಬ ಹಳ್ಳಿಯಲ್ಲಿ ಮಳೆ ತರಿಸುವದಕ್ಕಾಗಿ ಮೂರು ಜನರು ಫರ್ ವೃಕ್ಷ ಹತ್ತಿಕೊಳ್ಳುತ್ತಾರೆ. ಅವರಲ್ಲೊಬ್ಬನು ಪಾತ್ರೆಗಳನ್ನು ಬಡಿದು ಗುಡುಗಿನ ಅನುಕರಣ ಮಾಡುವನು. ಎರಡನೆಯವನು ಎರಡು ಕೆಂಡಗಳನ್ನು ಕುಟ್ಟಿ ಕಿಡಿ ಹಾರುವಂತೆ ಮಾಡಿ ಮಿಂಚಿನ ಅನುಕರಣಮಾಡುವನು. ಮೂರನೆಯವನು ಕೆಲ ಟೊಂಗೆಗಳನ್ನು ಕೂಡಿಸಿ ಒಂದು ಪಾತ್ರೆಯಿಂದ ನೀರನ್ನು ಎಲ್ಲ ಕಡೆ ಚಿಮುಕಿಸುವನು. ಓರಿನೋಕೋದ ಇಂಡಿಯನರು ಬಾಲಗಪ್ಪೆ ನೀರಿನ ದೇವತೆಯೆಂದು ನಂಬುತ್ತಿದ್ದರು. ಅದನ್ನು ಕೊಲ್ಲಲು ಹೆದರುತ್ತಿದ್ದರು. ಮಳೆ ಬೀಳದಿದ್ದಾಗ ಅವನ್ನು ಪಾತ್ರೆಯಲ್ಲಿ ಹಾಕಿ ಕೋಲಿನಿಂದ ಬಡಿಯುತ್ತಿದ್ದರು. ನಮ್ಮಲ್ಲಿಯೂ ಕಪ್ಪೆಯನ್ನು ಕೊಲ್ಲುವುದು ನಿಷಿದ್ಧ. *ಗೋಕರ್ಣದಲ್ಲಿ ಮಳೆ ಬಹಳ ದಿನ ಬಾರದಿದ್ದರೆ ಇಂದ್ರನ ಮೂರ್ತಿಯ ಕಣ್ಣಿಗೆ ಮೆಣಸಿನ ಪುಡಿ ಹಾಕಿ ಅದನ್ನು ಬಿಸಿಲಿನಲ್ಲಿ ಇಡುತ್ತಾರೆ. ಆಸ್ಟ್ರೇಲಿಯದ ಡೀರಿ ಜನರು "ಮುರ-ಮುರ" ಎಂಬ ದೇವತೆಗೆ ಗಾಯ ಮಾಡಿಕೊಂಡು ರಕ್ತದ ಬಲಿ ಕೊಡುತ್ತಾರೆ. ರಕ್ತ ಬೀಳುವುದು ಮಳೆಯ ಅನುಕರಣವಾಗಿರಬಹುದು. ಅನೇಕ ಕಾಡು ಜನರಲ್ಲಿ ಪರಂಪರೆಯ ರಹಸ್ಯವಿಧಾನದಿಂದ ಮಳೆಯನ್ನು ತರಿಸುವ ಕುಟುಂಬಗಳಿವೆ. ನರ್ತನ ವಿಧಾನವೂ ಕೆಲ ಕಡೆ ಇದೆ. ನೀರಿನಲ್ಲಿ ಮುಳುಗುವ, ಜಲಕ್ರೀಡೆ ಮಾಡುವ ವಿಧಾನಗಳೂ ರಶ್ಯಾ, ಸಿಲೆಬಸ್ ಹಾಗು ಉತ್ತರ ಆಫ್ರಿಕಾಗಳಲ್ಲಿವೆ.

ಮಳೆಯನ್ನು ನಿಲ್ಲಿಸಲು ಅನೇಕ ಜನಾಂಗಗಳಲ್ಲಿ ಬೆಂಕಿಯ ಉಪಯೋಗ ಮಾಡುತ್ತಾರೆ. ನ್ಯೂ ಬ್ರಿಟನ್ನದ ಸಲ್ಕಾ ಜನ

---

* ಕಾರವಾರ ಜಿಲೆ

ಕಲ್ಲನ್ನು ಕೆಂಪಗೆ ಕಾಸಿ ಮಳೆಯಲ್ಲಿಡುತ್ತಾರೆ, ಅಥವಾ ಬಿಸಿ ಬೂದಿಯಿಂದ ಸುಡಿಸಿಕೊಳ್ಳಲು ಆಶಿಸದೆ ನಿಲ್ಲುವದೆಂದು ಅವರ ಕಲ್ಪನೆ. ತೆಲುಗರಲ್ಲಿ ಬೆತ್ತಲೆಯಾದ ಸಣ್ಣ ಹುಡುಗಿಯನ್ನು ಉರಿಯುವ ಕೊಳ್ಳಿ ಹಿಡಿಸಿ ಮಳೆಯಲ್ಲಿ ಕಳಿಸುತ್ತಾರಂತೆ. ಬೆತ್ತಲೆ ಹೆಂಗಸರು ಆಕಾಶಕ್ಕೆ ಬೆಂಕಿಯನ್ನು ತೂರಿದರೆ ೧೨ ವರ್ಷ ಮಳೆ ಬರುವುದಿಲ್ಲವೆಂದು ಧಾರವಾಡ ಜಿಲ್ಲೆಯ ಕುಂದಗೋಳದ ಜನರು ನಂಬುತ್ತಾರಂತೆ.

ನ್ಯೂಗಿನಿಯ ಬಿಬಿಲಿ ದ್ವೀಪದ ಜನ ಗಾಳಿ ಬೀಸುವಂತೆ ಮಾಡಲು ಬಾಯಿಯಿಂದ ಹವೆ ಊದುತ್ತಾರೆ. ಕೆಲ ಜನಾಂಗದವರು ಸಿಳ್ಳು ಹಾಕಿದರೆ ಗಾಳಿ ಬೀಸುವದೆಂದು ತಿಳಿಯುತ್ತಾರೆ.

ಗ್ರ್ಯಾನ್ ಚಾಕೊದ ಲೆಂಗುವಾ ಇಂಡಿಯನರು ಸುಂಟರಗಾಳಿ ಬಂದರೆ ಭೂತದ ಚಲನ ಎಂದು ತಿಳಿಯುತ್ತಾರೆ. ಅದನ್ನು ಹೆದರಿಸಲು ಕೋಲಿನಿಂದ ಬಡಿಯುತ್ತಾರೆ. ದಕ್ಷಿಣ ಅಮೆರಿಕದ ಪಯಗುವಾ ಜನರು ಬೆಂಕಿ ಕೊಳ್ಳಿಹಿಡಿದು ಬಿರುಗಾಳಿಯ ಮೇಲೇರಿ ಹೋಗುತ್ತಾರೆ.

## ಆತ್ಮದ ಕಲ್ಪನೆ

ಅದೃಶ್ಯಶಕ್ತಿಗಳನ್ನು ಸುಲಭವಾಗಿ ನಂಬುವ ಮಾನವ ಆತ್ಮದ ವಿಷಯದಲ್ಲಿ ಅನೇಕ ವಿಚಿತ್ರವಾದ ಕಲ್ಪನೆಗಳನ್ನು ಇಟ್ಟುಕೊಂಡಿದ್ದಾನೆ. ಸಂಸ್ಕೃತದಲ್ಲಿ 'ಅನ್' ಕ್ರಿಯಾಪದದ ಅರ್ಥ 'ಉಸಿರಾಡಿಸು' ಎಂದು ಇದೆ. ಅದರಿಂದ ಆತ್ಮ ಎಂಬ ಶಬ್ದ ಬಂದಿದೆ. ಆತ್ಮವು ಉಸಿರೆಂದು ಕೆಲ ಜನಾಂಗಗಳವರು ಸಹಜವಾಗಿ ತಿಳಿಯುತ್ತಾರೆ. ಸೆನ್ ಕಿ.ಸೊ.ವಾಲ್ ಜನರು ಆತ ಕೆ, ಮನ ಅಂದರೆ ಉಸಿರು ಎನ

ಕಾಡು ಜನರು ಎಲ್ಲ ಪ್ರಾಣಿಗಳಲ್ಲಿಯೂ ಸೂಕ್ಷ್ಮ ಆಕಾರದ ಪ್ರಾಣಿಗಳಿವೆಯೆಂದು ತಿಳಿಯುತ್ತಾರೆ. ಮನುಷ್ಯನ ಶರೀರದ ಒಳಗಿನ ಸೂಕ್ಷ್ಮ ಮಾನವ ಆತ್ಮ. ಸಾವಿನಲ್ಲಿ ಆ ಸೂಕ್ಷ್ಮ ಮಾನವ ಹೊರಟು ಹೋಗುತ್ತಾನೆ. ಅದ್ದರಿಂದ ಆ ಆತ್ಮ ಪಾರಾಗಿ ಹೋಗದಂತೆ ಅಥವಾ ಹೋದರೂ ತಿರುಗಿ ಬರುವಂತೆ ಎಚ್ಚರಿಕೆ ತೆಗೆದುಕೊಳ್ಳಬೇಕು. ಅದು ಶರೀರದ ರಂಧ್ರಗಳಿಂದ ವಿಶೇಷವಾಗಿ ಬಾಯಿ, ಮೂಗುಗಳಿಂದ ಹೋಗುವುದೆಂದು ಕಲ್ಪನೆಯಿದೆ. ಸಿಲೆಬಸ್ ದ್ವೀಪದಲ್ಲಿ ರೋಗಿಯ ಮೂಗಿಗೆ, ಕಾಲಿಗೆ, ಹೊಕ್ಕುಳಿಗೆ ಕಬ್ಬಿಣದ ಕೊಂಡಿಗಳನ್ನು ಕಟ್ಟಿಡುತ್ತಾರೆ–ಪಾರಾಗಿ ಹೋಗಲೆಳಸುವ ಆತ್ಮವನ್ನು ಹಿಡಿಯಬೇಕೆಂಬ ಉದ್ದೇಶದಿಂದ. ಮಾರ್ಕ್ವೆಸಾಸನರು ಸಾಯುವ ಮನುಷ್ಯನ ಬಾಯಿ ಮೂಗುಗಳನ್ನು ಒತ್ತಿ ಹಿಡಿಯುತ್ತಿದ್ದರು ಸಿಲೆಬಸ್ಸಿನ ಅಲ್ಫೋರ ಜನರಲ್ಲಿ ಹಡೆಯುವ ಮನೆಯಲ್ಲಿ ಎಲ್ಲರೂ ಬಾಯಿ ಮುಚ್ಚಿಕೊಳ್ಳಬೇಕು. ಯಾರಾದರೂ ಶಿಶುವಿನ ಆತ್ಮವನ್ನು ನುಂಗಬಹುದೆಂಬ ಹೆದರಿಕೆಯೇ ಅದಕ್ಕೆ ಕಾರಣ. ಮೂಗನ್ನು ಮುಚ್ಚುವದು ಏಕೆ ಅಗತ್ಯವಿಲ್ಲ ಎಂದು ಕೇಳಿದರೆ ಆ ಜನರು ಮೂಗಿನ ಮೂಲಕ ಆತ್ಮ ಉಸಿರು ತಕ್ಕೊಳ್ಳುವಾಗ ಒಳಗೆ ಹೋದರೂ ಉಸಿರು ಬಿಡುವಾಗ ಹೊರಗೆ ಬರುವದೆಂಬ ಸಮಾಧಾನ ಹೇಳುತ್ತಾರೆ. ನಮ್ಮ ಜನರಲ್ಲಿ ಆಕಳಿಸುವಾಗ ಬಾಯಿಗೆ ಕೈ ಹಿಡಿಯುವ ಪದ್ಧತಿ ಆತ್ಮ ಹೊರಗೆ ಹೋಗಬಾರದೆಂಬ ಉದ್ದೇಶದಿಂದಲೇ ಇದ್ದಿರಬೇಕು. ಗಡುತರ ಮನುಷ್ಯರ ಆತ್ಮ ಗಡುತರ, ಸೀರಾದವರ ಆತ್ಮ ಸೀರಾಗಿದೆಯೆಂದು ಸಣ್ಣವರ ಆತ್ಮ ಸಣ್ಣದೆಂಬ ಕಲ್ಪನೆ ಕೆಲ ಜನಾಂಗಗಳಲ್ಲಿದೆ

ನಿದ್ದೆ ಮಾಡಿದಾಗ ಆತ್ಮ ತಿರುಗಲು ಹೋಗುವದೆಂಬ ಕಲ್ಪನೆ

ಯಿದೆ. ಸ್ವಪ್ನದಲ್ಲಿ ಮಾಡಿದ ಎಲ್ಲ ಕೆಲಸಗಳನ್ನೂ ಆತ್ಮವು ನಿಜವಾಗಿ ಮಾಡಿತೆಂದು ನಂಬಿಕೆಯಿದೆ. ಸ್ವಪ್ನದಲ್ಲಿ ನಡೆದ ಎಲ್ಲ ಸಂಗತಿಗಳನ್ನು ನಿಜವೆಂದೇ ಅನೇಕ ಅಮೇರಿಕನ್ ಇಂಡಿಯ ನರು ನಂಬುತ್ತಾರೆ. ಅನೇಕ ಕಾಡು ಜನರಲ್ಲಿದ್ದಂತೆಯೇ ನಮ್ಮ ಲ್ಲಿಯೂ ನಿದ್ದೆಯಲ್ಲಿದ್ದವನನ್ನು ಒಮ್ಮೆಲೆ ಎಬ್ಬಿಸಬಾರದು. ಯಾಕೆಂದರೆ ಹೊರಟು ಹೋದ ಆತ್ಮ ತಿರುಗಿ ಬಂದು ಸೇರಲು ವೇಳೆ ಸಾಲದೆ ಹೋಗಬಹುದು. ಶರೀರದ ಉಡುಪನ್ನು ಬದಲಿಸ ಬಾರದು. ನಿದ್ದೆಯಲ್ಲಿದ್ದವನ ಮೋರೆಗೆ ಬಣ್ಣವನ್ನೂ ಬಳಿಯ ಬಾರದು. ಯಾಕೆಂದರೆ ಹೊರಗೆ ಹೋದ ಆತ್ಮ ತಿರುಗಿ ಬಂದ ಮೇಲೆ ತನ್ನ ಶರೀರದ ಗುರುತು ಹಿಡಿಯದೆ ಹೋಗ ಬಹುದು.

ಆತ್ಮ ಜೇರೆ ಬೇರೆ ಪ್ರಾಣಿಗಳ, ಕೀಟಕಗಳ ರೂಪವನ್ನೂ ಧರಿಸಿ ಹೊರಟು ಹೋಗಬಹುದು. ಸೈಬೀರಿಯದ ಬುರ್ಯಟ್ ಎಂಬ ಜನರು ಆತ್ಮ ಕಣ್ಣಿಗೆ ಕಾಣುವುದೆಂದು ತಿಳಿಯುತ್ತಾರೆ. ಸಾಮಾನ್ಯವಾಗಿ ಜೇನ್ನೊಣದ ಆಕಾರ ಹೊಂದಿದೆಯೆಂದು ತಿಳಿ ಯುತ್ತಾರೆ. ಜರ್ಮನಿಯಲ್ಲಿ ಆತ್ಮ ಹಕ್ಕಿ, ಅಥವಾ ಇಲಿಯ ಆಕಾರದಿಂದ ನಿದ್ದೆ ಮಾಡುವವನ ಬಾಯಿಯಿಂದ ಹೋಗುವ ದೆಂದು ತಿಳಿಯುತ್ತಾರೆ. ಶಿಶು ಬಾಯಿ ತೆರೆದುಕೊಂಡು ನಿದ್ದೆ ಮಾಡಲು ಕೊಡಬಾರದೆಂದು ನಂಬುತ್ತಾರೆ.

ಸೊಲೊಮನ್ ದ್ವೀಪಸ್ತೋಮಗಳ ಎಡ್ಡಿಸ್ಟೋನ್ ಎಂಬಲ್ಲಿ ಆತ್ಮಕ್ಕೆ 'ಗಲಗಲ' ಅಂದರೆ 'ನೆರಳು' ಎಂಬ ಅರ್ಥದ ಶಬ್ದ ವಿದೆ. ಕರೇ ಸರೋವರದಲ್ಲಿ ಝುಲು ಜನರು ಇಣಿಕಿ ನೋಡುವ ದಿಲ್ಲ. ಅಲ್ಲಿರುವ ಯಾವದಾದರೂ ಪ್ರಾಣಿ ತಮ್ಮ ನೆರಳನ್ನು ನುಂಗಿದರೆ ತಾವು ಸಾಯುವೆವೆಂಬ ಹೆದರಿಕೆಯೇ ಅದಕ್ಕೆ ಕಾರಣ.

ಬಸುಟೋ ಜನರಲ್ಲಿ ಮೊಸಳೆಗಳು ಮನುಷ್ಯನ ನೆರಳನ್ನು ನೀರಿನಲ್ಲೆಳೆದುಕೊಂಡು ಹೋಗಿ ಆತನನ್ನು ಕೊಲ್ಲಬಹುದೆಂಬ ಹೆದರಿಕೆಯಿದೆ. ರಾಮಾಯಣದಲ್ಲಿ ಹನುಮಂತ ಸಮುದ್ರದ ಮೇಲೆ ಹಾರಿ ಹೋಗುವಾಗ ಮೊಸಳೆ ಅವನ ನೆರಳನ್ನು ನುಂಗಿದಂತೆಯೂ ಹನುಮಂತ ಸರ್ರನೆ ಕೆಳಗೆ ಬಿದ್ದು ಆ ಮೊಸಳೆಯ ಬಾಯಿಯಲ್ಲಿ ಸಿಕ್ಕನೆಂದೂ ಕಥೆ ಬರುತ್ತದೆ. ಆತ ಬಹು ಶಕ್ತಿವಂತನಾದ್ದರಿಂದ ಅದನ್ನು ಕೊಂದು ಮುಂದೆ ಹಾರಿಹೋದನು. ನೀರಿನಲ್ಲಿ ಪ್ರತಿಬಿಂಬವನ್ನು ನೋಡಬಾರದೆಂದು ವಿಶೇಷವಾಗಿ ರಾತ್ರಿಯಲ್ಲಿ ನೋಡಬಾರದೆಂದು ಹೇಳುವುದಕ್ಕೆ ಇದೇ ಹೆದರಿಕೆಯಿದೆ. ರೋಗಿ ಕನ್ನಡಿಯನ್ನು ನೋಡಬಾರದೆನ್ನುವದಕ್ಕೆ ಇಂಥದೇ ಕಾರಣವಿದೆ.

ಅನೇಕ ಕಾಡು ಜನರಿಗೆ ಕೆಮರಾದ ಹೆದರಿಕೆಯಿದೆ. ಮೆಕ್ಸಿಕೋದ ಟಿಪಿಹುವನೆ ಜನ ಫೋಟೋ ತೆಗೆಸಿಕೊಳ್ಳಲು ಅಂಜುತ್ತಾರೆ. ಆ ಕೆಮರಾ ಪೆಟ್ಟಿಗೆಯಲ್ಲಿ ಆತ್ಮವನ್ನು ಸೆರೆಹಿಡಿಯುವರೆಂಬ ಹೆದರಿಕೆ ಅನೇಕ ಜನಾಂಗಗಳಿಗಿದೆ. ಸಿಕ್ಕಿಂ ಪ್ರಾಂತದ ಜನರು ಕೆಮೆರಾದಲ್ಲಿ ಆತ್ಮವನ್ನು ಸೆರೆಹಿಡಿದವರು ಆತ್ಮದ ಮೇಲೆ ಅಧಿಕಾರ ನಡೆಸಬಹುದೆಂದೂ ಅದನ್ನು ಮೋಡಿ ಮಾಡಿ ಹಾಕಲೂ ಉಪಯೋಗಿಸಬಹುದೆಂದು ಹೆದರುತ್ತಾರೆ.

ಗ್ರೀನಲ್ಯಾಂಡಿನ ಎಸ್ಕಿಮೊ ಜನರಲ್ಲಿ ಮನುಷ್ಯನು ಶರೀರ, ಆತ್ಮ, ಹೆಸರು ಈ ಮೂರು ಘಟಕಗಳಿಂದ ಸಮೇತನಾಗಿದ್ದಾನೆಂದು ತಿಳಿವಳಿಕೆಯಿದೆ. ಕೆಲ ಕಾಡು ಜನರು ತಮ್ಮ ಹೆಸರು ಹೇಳಲು ಸಿದ್ಧರಿರುವುದಿಲ್ಲ. ತಮ್ಮ ನಿಜವಾದ ಹೆಸರು ತಿಳಿದರೆ ತಮ್ಮ ಮೇಲೆ ಮಾಟಗಾರನ ಅಧಿಕಾರ ನಡೆಯುವದೆಂದು ತಿಳಿಯುತ್ತಾರೆ. ಕೆಲವರಿಗೆ ಅನೇಕ ಹೆಸರುಗಳಿವೆ. ಹೆಸರು ಹೇಳಿದರೆ

ತಮ್ಮ ಒಂದು ಮುಖ್ಯ ಅಂಶವನ್ನು ಕಳಕೊಂಡಂತಾಗುವದೆಂಬ ಕಾರಣದಿಂದ ಕೆನ್ಯಾದ ತರುಣರು ತಮ್ಮ ಮೊದಲನೆ ಹೆಸರು ಹೇಳುವುದಿಲ್ಲ. ಹೆಂಗಸರು ತಮ್ಮ ತಂದೆ ಅಥವಾ ಗಂಡಂದಿರ ಮೊದಲನೆ ಹೆಸರು ಹೇಳುವುದಿಲ್ಲ. ಗಂಡಸರು ತಮ್ಮ ಹೆಂಡಿರ ಹೆಸರು ಹೇಳುವುದಿಲ್ಲ. ಕೈಟಾ, ಹೆಂಡತಿ ಅಥವಾ ಯಾವು ದಾದರೂ ಅಡ್ಡ ಹೆಸರಿನಿಂದ ಕರೆಯುತ್ತಾರೆ ಎಂದು ಬಾರ್ಟನ್ ಅವರು ಹೇಳುತ್ತಾರೆ. ನಮ್ಮಲ್ಲಿಯೂ ಗಂಡಹೆಂಡಿರು ( ವಿಶೇಷ ವಾಗಿ ಸಂಪ್ರದಾಯವಂತರು ) ತಮ್ಮ ಹೆಂಡತಿ ಅಥವಾ ಗಂಡನ ಹೆಸರನ್ನು ಹೇಳುವುದಿಲ್ಲ. ಇದು ಆಧುನಿಕ ದೃಷ್ಟಿಯ ಸ್ತ್ರೀ ಪುರುಷರಿಗೆ ಅನ್ವಯಿಸುವುದಿಲ್ಲ. ಹೆಸರಿನಲ್ಲೇನಿದೆ ಎಂದು ಹಿಂದಿನ ಜನ ತಿಳಿಯುತ್ತಿದ್ದಿಲ್ಲ. ಒಬ್ಬ ಮನುಷ್ಯನ ಜೀವಾಳವೇ ಅದರಲ್ಲಿ ಅಡಕವಾಗಿದೆಯೆಂದು ತಿಳಿಯುತ್ತಿದ್ದರು.

## ಮರಣದ ಕಲ್ಪನೆ

ಸತ್ತ ಮೇಲೆ ಆತ್ಮ ಇಂತಿಷ್ಟು ದಿನ ಸತ್ತ ಜಾಗದ ಸುತ್ತಲು ಇರುವುದೆಂದು ಕೆಲ ಜನಾಂಗದವರ ಕಲ್ಪನೆ. ಅದು ಭೂಮಿಯ ಕೆಳಗೆ ಸುಂದರವಾದ ಸ್ಥಳಕ್ಕೆ ಹೋಗುವು ದೆಂದು ಎಸ್ಕಿಮೊ ಜನರ ಕಲ್ಪನೆ. ಫಿನ್‌ಜನರಲ್ಲಿ ಸತ್ತವರ ಆತ್ಮ ನದಿಯನ್ನು ದಾಟಿಹೋಗಬೇಕೆಂದಿದೆ. ಸತ್ತಮೇಲೂ ಜೀವಿಸಿದ್ದಾಗಿನಂಥ ಜೀವನವಿದೆಯೆಂದು ಕೆಲ ಅನಾಗರಿಕ ಜನಗಳ ಕಲ್ಪನೆ. ಆಫ್ರಿಕಾದ ಒಂದು ನಿಗ್ರೋ ಪಂಗಡದ ಮುಖಂಡ ಸತ್ತಾಗ ಆತನ ಹೆಂಡಂದಿರನ್ನು ಜೀವಂತ ಹೂಳುವ ಪದ್ಧತಿಯಿದೆಯಂತೆ. ಇಜಿಪ್ತದಲ್ಲಿ ಸತ್ತ ಅರಸರ, ಹಾಗೂ ಸರದಾರರ ಹೆಣಗಳ ಕರುಳನ್ನು ತೆಗೆದು ಸುಗಂಧದ್ರವ್ಯ ಹಾಕಿ

ಪಿರಾಮಿಡ್ಡುಗಳಲ್ಲಿ ಹೂಳಿಡುತ್ತಿದ್ದರು. ಅವರೊಡನೆ ಅವರ ಸೇವಕರು, ಹೆಂಡಂದಿರನ್ನೂ ಹೂಳಿದ ಉದಾಹರಣೆಗಳಿವೆ. ಅವರು ಜೀವಿಸಿದ್ದಾಗ ಬೇಕಾದ ಆಯುಧ, ಅರಿವೆ ಅಂಚಡಿ ಹಾಗೂ ರೊಟ್ಟಿಗಳನ್ನು ಸಂಗಡ ಹೂಳುತ್ತಿದ್ದರು. ಕಟ್ಟಿಗೆಯ ತುಂಡುಗಳನ್ನು ಪ್ರಿಡ್ಮಿಸ ಆಕಾರ ಮಾಡಿ ಇಟ್ಟಿರುವುದೂ ಉಂಟು.

ಸತ್ತವರ ಪ್ರೇತ ತಿರುಗಿ ಬರಬಹುದೆಂಬ ನಂಬಿಕೆ ಅನೇಕ ಪಂಗಡಗಳಲ್ಲಿದೆ. ಅವರ ಪ್ರೇತ ತಿರುಗಿ ಬಾರದಂತೆ ದಾರಿ ತಪ್ಪಿಸುವ, ಹೆಣ ತೆಗೆದುಕೊಂಡು ಹೋಗುವಾಗ ತಮ್ಮ ಗುರುತು ಹತ್ತದಂತೆ ವೇಷ ಬದಲಿಸಿಕೊಳ್ಳುವ ಅನೇಕ ರೀತಿಗಳಿವೆ. ಗೋಲ್ಡ್ ಕೋಸ್ಟಿನಲ್ಲಿ ಹೆಣ ಹೊತ್ತುಕೊಂಡು ಗೋರಿಗೆ ತೆಗೆದುಕೊಂಡು ಹೋಗುವಾಗ ಗಂಡಸರು ಹೆಂಗಸರಂತೆ, ಹೆಂಗಸರು ಗಂಡಸರಂತೆ ವೇಷ ಹಾಕಿಕೊಂಡು ಹೋಗುತ್ತಾರೆ. ಕಿಡಕಿಯಿಂದ ಹೆಣ ಹೊತ್ತುಕೊಂಡು ಹೋಗುವ ಸಂಪ್ರದಾಯವೂ ಅನೇಕ ಕಡೆ ಇದೆ.

ತಮ್ಮ ಹಾಗು ತಮ್ಮ ಜನಾಂಗಗಳ ಸುರಕ್ಷಿತತೆಗಾಗಿ ಮೇಲೆ ಹೇಳಿದ ಅನೇಕ ಕ್ರಮಗಳಂತೆ ಇನ್ನೂ ಕೆಲ ಸುರಕ್ಷಿತತೆಯ ಕ್ರಮಗಳನ್ನು ತೆಗೆದುಕೊಳ್ಳುತ್ತಾರೆ. ಸತ್ತ ಮನೆಯನ್ನು ಸುಟ್ಟು ಹಾಕುವರು ಕೆಲವರು. ಅದನ್ನು ಬಿಟ್ಟೋಡುವವರು ಕೆಲವರು. ಸತ್ತವರ ಹೆಸರು ಹೇಳುವುದಿಲ್ಲ ಕೆಲ ಜನಾಂಗಗಳವರು. ಅವರ ಹೆಸರಿಗೆ ಹೋಲಿಕೆಯಿದ್ದ ವಸ್ತುಗಳ ಹೆಸರುಗಳನ್ನು ಸಹ ಬದಲಾಯಿಸುತ್ತಾರೆ, ರಜಸ್ವಲೆಯರಾದ ಹೆಂಗಸರೂ, ಹಡೆದ ಹೆಂಗಸರೂ, ಸತ್ತವರ ಮನೆಯವರೂ ದೆವ್ವಗಳ ಆಶ್ರಯಸ್ಥಾನಗಳೆಂಬ ಕಾರಣದಿಂದ ಗಂಡಾಂತರ ಉಂಟುಮಾಡಬಹುದೆಂದು ಕೆಲ

ಜನಾಂಗಗಳವರು ಅವರನ್ನು ಮುಟ್ಟಲು ಹೆದರುತ್ತಾರೆ. ಆಸ್ಟ್ರೇಲಿಯಾದ ನಿವಾಸಿಯೊಬ್ಬನು ರಜಸ್ವಲೆಯಾದ ತನ್ನ ಹೆಂಡತಿ ತನ್ನ ಕಂಬಳಿಯ ಮೇಲೆ ಮಲಗಿದ್ದಕ್ಕಾಗಿ ಆಕೆಯನ್ನು ಕೊಂದು ಹೆದರಿಕೆಯಿಂದಲೇ ಹದಿನೈದು ದಿನಗಳಲ್ಲಿ ಪ್ರಾಣ ಬಿಟ್ಟನಂತೆ.

ಪರದೇಶಿಯರು ಬಂದರೆ ಅವರ ಸಂಗಡ ವಿದೇಶೀಯ ಭೂತಗಳೂ ಬರುವವೆಂದು ಕಾಡುಜನರು ಹೆದರುತ್ತಾರೆ. ಭೂತವೈದ್ಯನು ಬಂದು ಕೆಲಕ್ರಮ ಜರುಗಿಸಿದನಂತರವೇ ಅನೇಕ ಕಡೆ ವಿದೇಶೀಯರನ್ನು ತಮ್ಮಲ್ಲಿ ಬರಮಾಡಿಕೊಳ್ಳುತ್ತಾರೆ. ಕ್ರೆವೊ ಎಂಬ ಯುರೋಪಿಯನ್ನನು ದಕ್ಷಿಣ ಅಮೇರಿಕಾದ ಅಪಲ್ಲೈ ಇಂಡಿಯನರ ಪ್ರದೇಶಕ್ಕೆ ಹೋದಾಗ ಅನೇಕ ದೊಡ್ಡ ಇರುವೆಗಳನ್ನು ತಂದು ಅವನ ಹಸ್ತಿರ ಕೊಟ್ಟು ತನಗೆ ಕಡಿಸು ಎಂದು ಅನೇಕ ದೊಡ್ಡವರು ಚಿಕ್ಕವರೆಲ್ಲಾ ಇರುವೆಗಳಿಂದ ಕಡಿಸಿಕೊಂಡು ಮುಖಗಳನ್ನು ಊದಿಸಿಕೊಂಡರಂತೆ.

ಅನೇಕ ಪಂಗಡಗಳಲ್ಲಿ ಒಂದೊಂದು ಪ್ರಾಣಿ ಅವರ ದೇವತೆಯಾಗಿರುತ್ತದೆ. ಅದನ್ನು ಕೊಲ್ಲಕೂಡದು. ಕಡದ ಬಳಗ, ಮಿಕದ ಬಳಗ ಈ ರೀತಿಯಾಗಿ ಉತ್ತರ ಕನ್ನಡ ಜಿಲ್ಲೆಯ ಹಾಲಕ್ಕಿ ಒಕ್ಕಲಿಗರಲ್ಲಿ ಅನೇಕ ಬಳಗಗಳಿವೆ. ತಮ್ಮ ಬಳಗದ ಪ್ರಾಣಿಗಳನ್ನು ಅವರು ತಿನ್ನುವುದಿಲ್ಲ, ಕೊಲ್ಲಲೂ ಆಗದು. ಒಂದೇ ಬಳಗದವರು ಪರಸ್ಪರ ಹೆಣ್ಣು ಕೊಟ್ಟು ತಕ್ಕೊಳ್ಳಲೂ ಆಗದು. ಈ ಪ್ರಾಣಿಗಳ ಬಳಗದ ಪದ್ಧತಿ ಜಗತ್ತಿನ ಬಹುತೇಕ ಅನಾಗರಿಕ ಜನಾಂಗಗಳಲ್ಲಿರುತ್ತದೆ. ಗೋತ್ರವ್ಯವಸ್ಥೆಯ ಪದ್ಧತಿಯನ್ನು ನೆನಪಿಗೆ ತರುತ್ತದೆ. ಈ ಕುಲಲಾಂಛನದ ಪದ್ಧತಿಯಿಂದ ಒಂದೇ ಬುಡಕಟ್ಟಿಗೆ ಸೇರಿದವರೊಳಗೆ ಪರಸ್ಪರರಲ್ಲಿ

ವಿವಾಹವಾಗುವುದು ತಪ್ಪಿರುತ್ತದೆ. ಮುಂದಿನ ಪೀಳಿಗೆಯ ಸುಧಾರಣೆಗೆ ಅನುಕೂಲವಾಗುತ್ತದೆ.

## ರೋಗಗಳ ಚಿಕಿತ್ಸೆ

ರೋಗಗಳು ನಿಸರ್ಗಾತೀತವಾದ ಶಕ್ತಿಗಳಿಂದ ಬರುವವೆಂದು ಅನಾಗರಿಕರ ಕಲ್ಪನೆಯಿದೆ. ಸಾಮಾನ್ಯವಾಗಿ ಮಾಟದಮೂಲಕ ಶರೀರದಲ್ಲಿ ಪ್ರವೇಶ ಮಾಡಿದ ವಸ್ತುವಿನಿಂದಲಾಗಲಿ ಅಥವಾ ಮಾಟದಿಂದಲೇ ಶರೀರದಿಂದ ಎಳೆದು ತೆಗೆಯಲ್ಪಟ್ಟ ವಸ್ತುವಿನಿಂದಲಾಗಲಿ ರೋಗಬರುವದೆಂದು ಹೀಗೆ ಅನಾಗರಿಕನು ರೋಗ ಬರಲು ಎರಡು ಮುಖ್ಯವಾದ ಕಾರಣಗಳನ್ನು ಹೇಳುತ್ತಾನೆ. ಅನೇಕ ಅನಾಗರಿಕ ಜನಾಂಗಗಳವರು ವನಸ್ಪತಿಗಳನ್ನೂ ಔಷಧ ವಸ್ತುಗಳನ್ನೂ ಉಪಯೋಗಿಸುತ್ತಾರೆ. ಹಾಗು ಅವು ನಿಜವಾದ ಔಷಧ ಗುಣಗಳನ್ನು ಹೊಂದಿವೆ. ಆದರೆ ಅವು ಮೋಡಿಯ ವಿಧಾನದ ಅಥವಾ ಮಾಟದ ಘಟಕಗಳೆಂದು ತಿಳಿಯಲ್ಪಡುತ್ತವೆಯೆ ಹೊರತು ಔಷಧಗಳೆಂದಲ್ಲ. ಭೂತವೈದ್ಯನ ಮೋಡಿಯ ಶಕ್ತಿಯೇ ರೋಗಗುಣ ಮಾಡಲು ಕಾರಣವೆಂದು ತಿಳಿಯುತ್ತಾರೆ. ಆಸ್ಟ್ರೇಲಿಯದ ಭೂತವೈದ್ಯನು ರೋಗಿಯನ್ನು ನೆಲದ ಮೇಲೆ ಮಲಗಿಸಿ ಕೆಲ ಮಂತ್ರ ಪಠಿಸಿ ರೋಗಿಯ ಭೂತವನ್ನು ಬಾಯಿಂದ ಹೀರಿ ತೆಗೆದು ದೂರ ಜಾಗದಲ್ಲಿ ಹುಗಿಯುತ್ತಾನೆ.

ಆಫ್ರಿಕಾ, ಮೊಂಗೋಲಿಯಾ, ಹಿಂದುಸ್ತಾನ, ಮಲಯಾ, ಸಿಲೋನ ಮೊದಲಾದ ಬಹಳ ದೇಶಗಳಲ್ಲಿ ಭೀಕರವಾದ ದೆವ್ವದ ಮುಖವಾಡ ಹಾಕಿಕೊಂಡು ಕುಣಿಯುವ, ದೆವ್ವನನ್ನು ಬಿಡಿಸುವ ಪದ್ಧತಿಯಿದೆ. ಮಾನಸಶಾಸ್ತ್ರದ, ಮನೋಚಿಕಿತ್ಸೆಯ ಹಾಗೆ ಅನೇಕ ಸಂದರ್ಭಗಳಲ್ಲಿ ಅವುಗಳ ಪ್ರಯೋಜನ ಕಂಡುಬರುತ್ತದೆ.

ವಿಶೇಷವಾಗಿ ಮನೋರೋಗಗಳನ್ನು, ಭೂತೋನ್ಮಾದ ಮೊದ ಲಾದ ವಿಕಾರಗಳನ್ನು ಗುಣಮಾಡುವಲ್ಲಿ ಅವುಗಳ ಉಪಯೋಗ ವಾಗುತ್ತದೆ.

ಸೂಚನೆ (Suggestion) ಕೊಡುವದರಿಂದ ಮನಸ್ಸಿನ ಮೇಲಿನ ಪರಿಣಾಮ ದೇಹದ ಮೇಲೆಯೂ ಬದಲಾವಣೆ ಮಾಡ ಬಹುದೆಂಬುದು ಸಿದ್ಧವಾಗಿದೆ. ದೆವ್ವ ಭೂತಗಳನ್ನು ನಂಬಿದ ಜನರಿಗೆ ಅಂಥ ರೀತಿಯಲ್ಲಿ ಗುಣವಾಗುವ ಭರವಸೆಯನ್ನು ಕೊಡುವ ಶಕ್ತಿ ಅವುಗಳಿಗಿದೆ. ಈ ರೀತಿ "ಮೈಮೇಲೆ" ಬರು ವವರು ಅಪಸ್ಮಾರ, ಉನ್ಮಾದ (ಹಿಸ್ಟೀರಿಯಾ) ಮುಂತಾದ ರೋಗಿಗಳಂತೆ ಮೈಯನ್ನು ವಿಕಾರವಾಗಿ ಕುಣಿಸಿ ದೇಹಭಾನ ವಿಲ್ಲದ ಅವಸ್ಥೆಯನ್ನು ಹುಟ್ಟಿ ರೋಗಿಗಳ ಮನಸ ಮೇಲೆ ನಿಯಂತ್ರಣಪಡಬಲ್ಲರು. ಹಾಗೆ ಭೂತದ ಅಥವಾ ದೇವರ ಆವೇಶವಾದವರನ್ನು ಭೂತ ಅಥವಾ ದೇವರೆಂದೇ ತಿಳಿದು ಸಂಬೋಧಿಸಿ, ರೋಗನಿದಾನವನ್ನೂ ಭವಿಷ್ಯವನ್ನೂ ಕೇಳಿ ಕೊಳ್ಳುತ್ತಾರೆ. ಉತ್ತರ ಕನ್ನಡ ಜಿಲ್ಲೆಯ ದೇವಾಲಯಗಳಲ್ಲಿ ವಿಶೇಷ ಪೂಜೆಯ ಅಥವಾ ಉತ್ಸವದ ದಿನಗಳಲ್ಲಿ ಕೆಲ ವಿಶಿಷ್ಟ ಜನರಿಗೆ "ಬಗಿಲ ಜಟ್ಗ" ಬರುತ್ತದೆ. ಆರತಿಯ ಕಾಲಕ್ಕೆ ಅವರಿಗೆ ಮೈಮೇಲೆ ಬಂದು ಬಾಗಿಲಪಟ್ಟಿ ಹಿಡಿದುಕೊಂಡು ಆವೇಶದಿಂದ ಕುಣಿಯುತ್ತಾರೆ. ಜನರು ತಮ್ಮ ಸಂಕಷ್ಟಗಳನ್ನು ಹೇಳಿ ಪರಿಹಾರವನ್ನು ಕೇಳಿಕೊಳ್ಳುತ್ತಾರೆ. ಗ್ರೀಸಿನ ಅಪೋಲೋ ದೇವಾಲಯದ ಡೆಲ್ಫಿ, ಹಾಗೂ ಡೊಡೊನಾಗಳ ಪೂಜಾರಿಗಳು ಕಣಿ ಹೇಳುತ್ತಿದ್ದುದು ಪ್ರಸಿದ್ಧವಿದೆ. ಒಬ್ಬ ಸಾಮ್ರಾಟನು ಯುದ್ಧಕ್ಕೆ ಹೊರಡುವ ಮೊದಲು ಯುದ್ಧದ ಪರಿಣಾಮವನ್ನು ಕೇಳಿದಾಗ ಡೊಡೊನಾದ ಕಣಿ ಹೇಳುವವಳು 'ದೊಡ್ಡ

ಸಾಮ್ರಾಜ್ಯ ನಾಶವಾಗುವದು' ಎಂದು ಭವಿಷ್ಯ ಹೇಳಿದಳು. ಕಣಿಯಿಂದ ಧೈರ್ಯಪಡೆದ ರಾಜ ಯುದ್ಧ ಮಾಡಲು ನಂತರ ಅವನ ಸಾಮ್ರಾಜ್ಯವೇ ನಾಶವಾಯಿತು. ಹೀಗೆ ಅನೇಕ ಸಂದರ್ಭ ಗಳಲ್ಲಿ ಸಂದಿಗ್ಧ ಉತ್ತರಗಳನ್ನು ಈ 'ಮೈಮೇಲಿ' ಬರುವವರು ಕೊಡುತ್ತಿರುತ್ತಾರೆ.

ನಮ್ಮೂರ ಕಡೆ* ಜಾತ್ರೆ ನಡೆಯುವ ಸಂದರ್ಭದಲ್ಲಿ ಕಲಶ ಗಳ ಮೇಲೆ ಅಡಿಕೆಯ ಸಿಂಗಾರ ಹಾಗು ಇತರ ಹೂಗಳಿಂದ ಅರ್ಧವರ್ತುಲದ ಸುಂದರವಾದ ಕಮಾನನ್ನು ರಚಿಸಿ ಸಿಂಗರಿಸಿ ನಡುವೆ ದೇವರ ಮುಖವನ್ನು ಕಲಶದ ಮೇಲೆ ಇಟ್ಟು ಕಲಶ ಹೊತ್ತುಕೊಳ್ಳುವ "ಕಲಶದವರು" ಬರುತ್ತಾರೆ. ಅವರಿಗೂ ದೇವರು "ಮೈಮೇಲೆ" ಬರುತ್ತದೆ. ಆಗಲೂ ಸುತ್ತಲಿನ ಜನ ತಮ್ಮ ಕಷ್ಟಗಳನ್ನು ಹೇಳಿಕೊಂಡು ದೇವರ ಹತ್ತರ ಪರಿಹಾರದ ಕ್ರಮಗಳನ್ನು ಕೇಳಿಕೊಳ್ಳುತ್ತಾರೆ. ಭೂತಬಾಧೆ ಆದ ಹುಚ್ಚರು ಹಾಗೂ ಇತರ ರೋಗಿಗಳನ್ನು ಮುಂದೆ ನಿಲ್ಲಿಸಿದರೆ ಕಲಶದವರು ಅವರಿಗೆ ಅರ್ಥಾತ್ ಅವರನ್ನು ಆಕ್ರಮಿಸಿದ ಭೂತಗಳಿಗೆ ದೊಡ್ಡ ದಾಗಿ ಕೂಗಿ ಹೆದರಿಕೆ ಹಾಕಿ ಬೆತ್ತದಿಂದ ಹೊಡೆದು ಭೂತಗಳ ಉಚ್ಚಾಟನೆ ಮಾಡುತ್ತಾರೆ.

ಯಾರಿಗಾದರೂ ರೋಗ ಬಂದರೆ ನಮ್ಮಲ್ಲಿಯ ಹಳ್ಳಿಗಳಲ್ಲಿ ದೆವ್ವದ ಉಪದ್ರವದಿಂದಲೇ ರೋಗ ಬಂದಿದೆಯೆಂದು ಅಶಿಕ್ಷಿತರ ಕಲ್ಪನೆಯಾಗುತ್ತದೆ. ರೋಗವನ್ನು ಗುಣ ಮಾಡಲು ಮೊದಲು "ನೋಟಗಾರರ" ಹತ್ತರ ನೋಡಿಸುವದು ವಾಡಿಕೆಯಾಗಿದೆ. ಮಣೆಯ ಮೇಲೆ ಕವಡೆ ಅಥವಾ ಅಕ್ಕಿಯ ಕಾಳು ಇಟ್ಟು ಕೊಂಡು ಅವನ್ನು ತಿರುಗಿಸುತ್ತ ಕೆಲ ಭಾಗ ಬೇರೆ ಮಾಡಿ

* ಹೊಲನಗದ್ದೆ – ಕಾರವಾರ ಜಿಲ್ಲೆ.

ತವನ್ನು ಲೆಕ್ಕ ಮಾಡುತ್ತ ಅದರ "ಆಯ"ದ ಮೇಲಿಂದ ಇಂಥ ದೆವ್ವನ ಪೀಡೆಯಿದೆಯೆಂದು ನಿರ್ಣಯಿಸುವರು. ನೋಟ ನೋಡುವಾಗಲೆಲ್ಲ ಚಂಡಿ, ರಣಗೋಲೆ, ಮಾರಿ, ರಕ್ತದೇವತೆ, ಮುಂತಾದ ಅನೇಕ ದೇವತೆಗಳ ಹೆಸರು ಹಿಡಿದು ಕೂಗುತ್ತ ಕುಳಿತಲ್ಲೇ ಮೈಯನ್ನೆಲ್ಲಾ ಸುತ್ತು ತಿರುಗಿಸುತ್ತ, ಕೆಲಸಲ ವಿಕಾರವಾಗಿ ಧ್ವನಿಯನ್ನು ಒಳಗೆ ತಕ್ಕೊಳ್ಳುತ್ತ ಧ್ವನಿ ಮಾಡುತ್ತ ಛೀ, ಥೂ ಮುಂತಾಗಿ ಕೂಗುತ್ತ ದೆವ್ವಗಳ, ಭೂತ ಗಳ ಉಚ್ಚಾಟನೆ ನಡೆಸುತ್ತಾರೆ. ಕೋಳಿಗಳ ಬಲಿ ಕೊಡಿಸುವೆ ವೆಂತಲೂ ಆಸೆ ತೋರಿಸಿ ಅವುಗಳಿಗೆ ರೋಗಿಯನ್ನು ಬಿಟ್ಟು ಹೋಗಲು ಮನ ಒಲಿಸುವರು. ದೆವ್ವದಿಂದಲೇ ರೋಗ ಬಂದ ದ್ದಾದರೆ ಔಷಧ ಕೊಟ್ಟರೂ ನೋಟ ನೋಡಿಸಿದ ಹೊರತು ಕಡಿಮೆಯಾಗುವದಿಲ್ಲವೆಂಬ ಮನಸ್ಸಿನ ಭ್ರಮೆ ಅನೇಕರಿಗಿದೆ. ಕಾಲಿಗೆ ಕಲ್ಲುತಾಗಿ ಪೆಟ್ಟಾದರೂ, ತಲೆವಡೆತ ಮಾತ್ರ ಇದ್ದರೂ ಅಥವಾ ಹೆಚ್ಚಿಗೆ ಉಂಡು ಅಜೀರ್ಣವಾದರೂ ಸಹ ಅನೇಕರು ನೋಟ ನೋಡಿಸುತ್ತಾರೆ. ಔಷಧೋಪಚಾರ ಮಾಡಿಕೊಂಡೂ ತಮಗೆ ನೋಟ ನೋಡಿಸಿದ್ದರಿಂದ ಉಪಶಮವಾಯಿತೆನ್ನುತ್ತಾರೆ. ಹಾಗೆ ಅವರಿಗೆ ತಮ್ಮ ನಂಬಿಕೆಯ ಮೂಲಕ ಅದರಿಂದ ಮನ ಸ್ಸಿಗೆ ಸಮಾಧಾನ ಸಿಗುವ ಹಾಗೆ ಕಾಣುತ್ತದೆ. ಆದರೆ ಕೆಲ ಜನರು ದೆವ್ವದ ಸಂಶಯದಿಂದ ಔಷಧ ಮಾಡಿಸುವದನ್ನು ಬಿಟ್ಟು ನೋಟವನ್ನಷ್ಟೇ ನೋಡಿಸಿ ರೋಗ ಕೈಮೀರಿದ ಮೇಲೆ ಡಾಕ್ಟರರನ್ನು ಕರೆಸಿದ ಉದಾಹರಣೆಗಳೂ ಇವೆ. ಅಜ್ಞ ಜನರ ಮಾನಸಿಕ ಆಗತ್ಯವನ್ನು ಮನಗಂಡೇ ವೇದಗಳಲ್ಲಿ ರೋಗಗಳಿಗೆ ಔಷಧಗಳೊಡನೆ ಮಂತ್ರ ಪ್ರಯೋಗವನ್ನೂ ಜೊತೆಯಾಗಿಯೇ ಹೇಳಿರುವುದು. ನೋಟಗಾರರು ಯಾರ ಮೇಲಾದರೂ ದೆವ್ವ

ಮಾಡಿ ಹಾಕಲೂ ಬಲ್ಲರಂತೆ. ಹಾಗೆ ಮಾಡುವಾಗ ಅವರ ಮನೆಯ ಸಹಾಯ ದೆವ್ವಗಳ ಮುಖ ಕಟ್ಟಿ ಇತರ ದೆವ್ವಗಳನ್ನು ಅವರ ಮೇಲೆ ಬಿಡುತ್ತಾರೆಂದು ಹೇಳುತ್ತಾರೆ. ಆ ದೆವ್ವ ಮಾಡಿದ್ದರಿಂದ ಕಷ್ಟ ಹೊಂದಿದವರು ಇತರ ಸಮರ್ಥ ನೋಟಗಾರರಿಂದಲಾಗಲಿ ಇಲ್ಲವೆ ಮಾಂತ್ರಿಕರಿಂದಲಾಗಲಿ ದೆವ್ವದ ಉಪದ್ರವವನ್ನು ಕಡಿಮೆ ಮಾಡಿಕೊಳ್ಳಬೇಕಾಗುತ್ತದೆ. ದೆವ್ವ ಮಾಡಿಸಿ ಹಾಕಿದ್ದಾರೆಂಬ ಸಂಶಯದಿಂದ ಸಂಬಂಧಿಕರೊಳಗೂ ಕಲಹ ಏಳುತ್ತದೆ. ಪರಸ್ಪರ ವೈರಿಗಳಾದರಂತೂ ಪರಸ್ಪರ ದೆವ್ವ ಮಾಡಿಸುವ, ತಮ್ಮ ಮೇಲಿನ ದೆವ್ವ ಬಿಡಿಸುವ ಕೆಲಸವೇ ಇಬ್ಬರಿಗೂ. ಬ್ರಾಹ್ಮಣರಲ್ಲಿಯೂ ದೆವ್ವದ ನಂಬಿಕೆಯುಳ್ಳವರು, ರೋಗ ಔಷಧದಿಂದ ಸುಲಭದಲ್ಲಿ ಗುಣವಾಗದಿದ್ದರೆ ನೋಟ ನೋಡಿಸುವವರು ಹಳ್ಳಿಗಳಲ್ಲಿ ಇದ್ದಾರೆ. ಇಬ್ಬರು ಅಣ್ಣ ತಮ್ಮಂದಿರ ದಾಯಾದಿ ಮತ್ಸರದಲ್ಲಿ ಹಿರಿಯನು ತಮ್ಮನ ಮನೆಯ ಮೇಲೆ ದೆವ್ವ ಮಾಡಿ ಹಾಕಿದನಂತೆ. ನಂತರ ತಮ್ಮನ ಮನೆಯವರಿಗೆ ಎಲ್ಲರಿಗೂ ಒಂದಿಲ್ಲೊಂದು ಕಾಹಿಲೆ ಪ್ರಾರಂಭವಾಯಿತಂತೆ ಕೊಟ್ಟಿಗೆಯಲ್ಲಿ ಎಮ್ಮೆಗಳು ಹಾಲು ಕೊಡುವುದನ್ನು ಕಡಿಮೆ ಮಾಡಿದವು. ದನಗಳು ಸಾಯಹತ್ತಿದವು. ಊಟ ಮಾಡುವಲ್ಲಿ ಮೊದಲಿಗಿಂತ ಎರಡುಪಟ್ಟು ಹೆಚ್ಚು ಅನ್ನ ಬೇಕಾಗುತ್ತಿತ್ತಂತೆ ಮನೆಯವರಿಗೆ. ಉಣ್ಣುವವರ ಹೊಟ್ಟೆಯಲ್ಲಿಯೇ ಭೂತ ಹೊಕ್ಕಿದೆಯೋ ಎನ್ನುವ ಹಾಗೆ. ಅವರ ದೃಷ್ಟಿಯಲ್ಲಿ ನೋಟ ನೋಡಿಸಿದ್ದರಿಂದಲೇ ಪರಿಸ್ಥಿತಿ ಸುಧಾರಿಸಿತು.

ಚೌಡಿ ಎಂಬ ದೆವ್ವದ ವಿಷಯದಲ್ಲಿ ಅನೇಕ ಕಥೆ ಹೇಳುತ್ತಾರೆ. ಅದು ಪೂಜೆಯನ್ನು ಬಯಸುತ್ತದೆ. ಪೂಜೆ ಸರಿಯಾಗಿ

ದೊರೆಯದಿದ್ದರೆ ಅನೇಕ ರೀತಿಯ ಪೀಡೆ ಕೊಡುತ್ತದೆ. ಕಲ್ಲುಗಳನ್ನು ತೂರುವುದು, ಒಮ್ಮೆಲೆ ಬೆಂಕಿ ಎಬ್ಬಿಸುವುದು, ಅದೃಶ್ಯವಾಗಿದ್ದುಕೊಂಡು ಹೊಡೆಯುವುದು, ಸಾಮಾನುಗಳನ್ನು ಇದ್ದಕ್ಕಿದ್ದಲ್ಲೇ ಅಡಗಿಸುವುದು, ಆಹಾರ ಉಣ್ಣಲು ಅಯೋಗ್ಯವಾಗಿ ಮಾಡುವುದು ಇಂಥ ಕಾಟ ಕೊಡುತ್ತವೆ. ಮಂತ್ರ ತಂತ್ರಗಳಿಂದ ಆ ಪೀಡೆಯನ್ನು ಶಮನ ಮಾಡಬಹುದು. ದೊಡ್ಡ ಸಾಂಕ್ರಾಮಿಕ ರೋಗ ಬಂದರೆ [illegible] ಊರಿನ ಜನರು ಊರು ಬಿಟ್ಟು ಹೋಗಿ ಬೇರೆ ಕಡೆ ತಾತ್ಕಾಲಿಕವಾಗಿ ಗುಡಿಸಲು ಕಟ್ಟಿಕೊಂಡು ಬಾಳುತ್ತಾರೆ. ಅಲ್ಲಿ ಅನೇಕ ದಿನ ಉಳಿದು ಬಲಿವಿಧಾನವನ್ನು ಆಚರಿಸುತ್ತಾರೆ. ಗಂಡಸರಲ್ಲಿ ಕೆಲವರು ಮೋರೆಗೆ ಕಪ್ಪು ಬಣ್ಣ ಬಳಿದುಕೊಳ್ಳುತ್ತಾರೆ. ಕೆಲವರು ಮೋರೆಗೆ ಮುಖವಾಡ ಹಾಕಿಕೊಂಡು ಎಲ್ಲರೂ ಕತ್ತಿ, ಕಸಬರಿಗೆ, ಬಂದೂಕು ಮೊದಲಾದವನ್ನು ತೆಗೆದುಕೊಂಡು ಊರಿಗೆ ಮರಳಿ ಕೂಗುತ್ತ ಮನೆಗಳ ಬಾಗಿಲು, ಗೋಡೆಗಳನ್ನು ಬಡಿಯುತ್ತ ದೆವ್ವಗಳ ಉಚ್ಚಾಟನೆ ಮಾಡುತ್ತಾರೆ.

ರೋಗಗಳನ್ನು ಮನುಷ್ಯರಿಂದ ಪ್ರಾಣಿಗಳಿಗೆ ವರ್ಗಾಯಿಸುವ ಪರಿಪಾಠವೂ ಇದೆ. [illegible] ಜನರಲ್ಲಿ ರೋಗಿ ಎತ್ತಿನ ಕಾಲನ್ನು ಹಿಡಿದುಕೊಂಡಿದ್ದಾಗ, ಆ ಎತ್ತನ್ನು ಬಲಿ ಕೊಡುತ್ತಾರೆ. ಯುರೋಪಿನಲ್ಲಿ, ಕತ್ತೆ [illegible] ಮೋರೆ ಮಾಡಿ ಕುಳಿತು ಅದರ ಕಿವಿಯಲ್ಲಿ "ನನಗೆ [illegible]" ಎಂದರೆ ಆ ನೋವು ಕತ್ತೆಗೆ ಹೋಗುತ್ತದೆಂಬ ನಂಬಿಕೆಯುಂಟು.

ಭೂತಗಳ ಉಚ್ಚಾಟನೆ ಮಾಡುವುದು ರೋಗನಿದಾನದ ಒಂದು ಕ್ರಮವಾದರೆ [illegible]. ಇಂದು ರೋಗ ಗುಣ ಮಾಡುವ ಕ್ರಮವೂ ಇದೆ. ಕೊಂಗೋದ ಕೆಲ ಪಂಗಡಗಳವರು

ರೋಗಿಯ ಆತ್ಮ ಆತನ ಶರೀರ ಬಿಟ್ಟು ಹೋದದ್ದರಿಂದಲೇ ಆತನಿಗೆ ರೋಗ ಬಂದಿದೆಯೆಂದು ತಿಳಿಯುತ್ತಾರೆ. ಅದು ಸಿಕ್ಕಲ್ಲಿ ತಿರುಗಾಡುತ್ತಿರಬಹುದು. ಆಗ ಮಾಟಗಾರನ ಸಹಾಯ ಬೇಕು. ಆತನು ಆ ಆತ್ಮವನ್ನು ಹಿಡಿದು ತಂದು ರೋಗಿಯ ಶರೀರದಲ್ಲಿ ಪುನಃ ಸೇರಿಸುತ್ತಾನೆ. ಸಾಮಾನ್ಯವಾಗಿ ಮರದ ಟೊಂಗೆಯಲ್ಲಿ ಅದು ಸೇರಿರುತ್ತದೆ. ಸುಮಾತ್ರಾದಲ್ಲೂ ರೋಗಿಯ ಆತ್ಮವನ್ನು ಮರಳುವಂತೆ ಕರೆಯುತ್ತಾರೆ.

ಕೆಲ ಸಲ ಭೂತ, ದೆವ್ವ, ಅಥವಾ ಮಾಟಗಾರರು ಆ ರೋಗಿಗಳ ಆತ್ಮಗಳನ್ನು ಎಳೆದುಕೊಳ್ಳಬಹುದು. ಅಂಥ ಸಂದರ್ಭದಲ್ಲಿ ಉಯ್ಯಾ ಎಂಬ ನಡುಗಡ್ಡೆಯ ಜನ ಭೂತವೈದ್ಯನೊಡನೆ ಸ್ಮಶಾನಕ್ಕೆ ಹೋಗಿ ಕೊಳಲೂದುವುದು, ಸಿಳ್ಳು ಹಾಕುವುದು, ಇವುಗಳಿಂದ ಆತ್ಮವನ್ನು ಮರಳಿಸಿ ರೋಗಿಯ ಶರೀರದಲ್ಲಿ ಸೇರಬೇಕೆಂದು ಕೂಗಿ ಹೇಳುತ್ತಾರೆ.

ಬಹಳ ಜನಗಳಿಗಾಗಲಿ ದನಗಳಿಗಾಗಲಿ ಉಪದ್ರವವಾದರೆ ಊರಿನಲ್ಲಿನ ಹಳೆ ಬುಟ್ಟಿ, ಮೊರ, ಕಸಬರಿಗೆ, ಕಸಕಡ್ಡಿಗಳನ್ನು ತಂದು ಊರ ಹೊರಗೆ ರಾಶಿ ಹಾಕುತ್ತಾರೆ. ಅದಕ್ಕೆ ಉಡಗಲಜ್ಜಿಯನ್ನು ಹೊತ್ತು ಹಾಕುವುದು ಎನ್ನುತ್ತಾರೆ. ಊರಿನಲ್ಲಿ ಸ್ವಚ್ಛತೆಯನ್ನಿಡುವುದೇ ಇದರ ಮೂಲ ಉದ್ದೇಶ ಎಂದು ಕಾಣುತ್ತದೆ. ಆದರೆ ಉಡಗಲಜ್ಜಿ ಒಂದು ದೆವ್ವವೆಂದೇ ಕಲ್ಪನೆಯಿದೆ.

## ನಿಮಿತ್ತಗಳು, ಶಕುನಗಳು

ಶಕುನಗಳಲ್ಲಿ ಹಿಂದುಗಳು ಬಹಳ ನಂಬಿಗೆ ಇಡುತ್ತಾರೆ. ಬೆಳಿಗ್ಗೆ ಎದ್ದ ಕೂಡಲೆ ಕಾಗೆಯನ್ನು ಎಡಪಕ್ಕದಲ್ಲಿ, ಹದ್ದನ್ನು ಬಲಪಕ್ಕದಲ್ಲಿ ನೋಡುವುದು, ಬರಿ ಪಾತ್ರೆ ಎದುರಾಗುವದು,

ಕಟ್ಟಿಗೆ ಹೊರೆ, ಹೊಗೆ, ಬೆಂಕಿ ಇವನ್ನು, ವಿಧವೆಯನ್ನು ನೋಡುವುದು ಅಪಶಕುನ ಎಂದು ತಿಳಿಯಲ್ಪಟ್ಟಿವೆ. ಹಿಂದಕ್ಕೆ ಬೌದ್ಧ ಸನ್ಯಾಸಿಯನ್ನು ನೋಡುವುದು ಅಪಶಕುನವೆಂದು ತಿಳಿಯುತ್ತಿದ್ದರು. ತಿಥಿ, ವಾರ, ನಕ್ಷತ್ರಗಳನ್ನು ನೋಡಿಕೊಂಡು ಪ್ರಯಾಣ ಮಾಡುವವರನ್ನು ಈಗಲೂ ಕಾಣಬಹುದು. ಯಾವ ದಿಕ್ಕಿನಲ್ಲಿ ರಾಹುವಿದ್ದರೂ ಆ ದಿಕ್ಕಿನಲ್ಲಿ ಪ್ರಯಾಣ ಮಾಡಬಾರದು. ಷಷ್ಠಿ, ಅಮಾವಾಸ್ಯೆ ಮುಂತಾದ ತಿಥಿಗಳು ಪ್ರಯಾಣಕ್ಕಾಗಲಿ ಕೆಲ ಒಳ್ಳೆ ಕೆಲಸಗಳಿಗಾಗಲಿ ಪ್ರಶಸ್ತವಲ್ಲ. ಭಾಷಾ ಪ್ರಾಂತೀಕರಣದ ಕಾಲದಲ್ಲಿ ಜ್ಯೋತಿಷಿಗಳ ಸಲಹೆಯಂತೆ ಅಧಿಕಾರ ಸ್ವೀಕಾರದ ಧಾರ್ಮಿಕವಿಧಿ ತ್ರಯೋದಶಿಯಂದು ನೆರವೇರಿತು. ಮರುದಿನ ಪ್ರಶಸ್ತವಲ್ಲವೆಂಬ ಕಾರಣದಿಂದ.

ಆಕಳು, ಕುದುರೆ, ಸುಮಂಗಲಿ, ಇಬ್ಬರು ಬ್ರಾಹ್ಮಣರು, ತುಂಬಿದ ಕೊಡ ಮುಂತಾದವನ್ನು ನೋಡುವುದು ಶುಭಶಕುನ. ಕೆಲವು ಹೆಂಗಸರ ಕಾಲ್ಗುಣ ಚೆನ್ನಾಗಿರುತ್ತದೆ. ಅವರನ್ನು ಮದುವೆಯಾದವರಿಗೆ ಭಾಗ್ಯ ಬರುತ್ತದೆಯೆನ್ನುತ್ತಾರೆ.

ಪೂರ್ವ ಆಫ್ರಿಕೆಯಲ್ಲಿ ದನಗಳನ್ನೂ ಮನುಷ್ಯರನ್ನೂ ಎಣಿಸುವುದು ಕೆಟ್ಟದ್ದು. ನಮ್ಮಲ್ಲಿ ಒಂಟಿ ಸೀನು ಅಶುಭ. ಕೆಲ ಜನರಿಗೆ ಅದು ಶುಭ. ಬ್ರಿಟಿಶ್ ಕೊಲಂಬಿಯದಲ್ಲಿ ಮೂರು ಸೀನು ಶುಭಶಕುನ. ಪಲಾಂಗ ಜನರಲ್ಲಿ ಹುಣ್ಣಿಮೆಯ ದಿನ ಹುಟ್ಟಿದರೆ ಶುಭ. ಗ್ರಹಣ ಅಥವಾ ಅಮಾವಾಸ್ಯೆಯಲ್ಲಿ ಅಶುಭ. ವಿಯೆನ್ನಾದಲ್ಲಿ ಫೋಟೋ ಸ್ಟುಡಿಯೋಗಳು ಬುಧವಾರ ಹಾಗೂ ಶುಕ್ರವಾರ ಮುಚ್ಚಿರುತ್ತವೆ. ಯಾಕೆಂದರೆ ಬುದ್ಧಿವಂತ ಜನರೂ ಅವು ಅಶುಭ ದಿನಗಳೆಂದು ಫೋಟೋ ತೆಗೆಸಿಕೊಳ್ಳುವುದಿಲ್ಲ. ಅನೇಕ ಅಮೇರಿಕನ್ನರಿಗೆ ಕರಿಯ ಬೆಕ್ಕು ಅಡ್ಡ

ಬರುವುದು ಸೇರುವದಿಲ್ಲ. ಗರ್ಭಿಣಿ ಸ್ತ್ರೀಯರು ಏಣಿಯ ಕೆಳಗೆ ಹೋಗುವುದು ಅಶುಭ. ಯುರೋಪಿಯನ್ನರಿಗೆ ೧೩ ಸಂಖ್ಯೆ ಅಶುಭ. ಪ್ರಶಿಯಾ (ಜರ್ಮನಿ) ದಲ್ಲಿ ವರ್ಷದಲ್ಲಿ ಅನೇಕ ದಿನಗಳು ಅಶುಭ. ಆ ದಿನಗಳಲ್ಲಿ ಹುಟ್ಟಿದ ಮಕ್ಕಳು ಅಶಕ್ತರೂ ರೋಗಿಗಳೂ ಆಗುವರೆಂಬ ಕಲ್ಪನೆಯಿದೆ.

## ಸ್ವಪ್ನಗಳು

ಸ್ವಪ್ನದ ಪರಿಣಾಮದ ವಿಷಯವಾಗಿ ಬೇರೆ ಬೇರೆ ಜನರ ನಂಬಿಗೆ ಬೇರೆ ಬೇರೆ ಇದೆ. ಸ್ವಪ್ನದಲ್ಲಿ ಅಶುಭ ಸಂಗತಿ ನೋಡಿದರೆ ಶುಭಪರಿಣಾಮವೆಂದೂ ಶುಭ ನೋಡಿದರೆ ಅಶುಭ ಪರಿಣಾಮವೆಂದೂ ಸಾಮಾನ್ಯ ನಂಬಿಕೆಯಿದೆ. ನಿದ್ರೆಯಲ್ಲಿ ಅಳುವುದು ಆನಂದದ ಸೂಚನೆ. ಸಾವನ್ನು ಕಂಡರೆ ದೀರ್ಘಾಯುಷ್ಯ. ಸರ್ಪ ಕಚ್ಚಿದಂತೆ ಕಂಡರೆ ಸಂಪತ್ತು. ಮದುವೆಯ ಮೆರವಣಿಗೆ ಕಂಡರೆ ಸಾವು. ಒಳ್ಳೆಯದರ ಅಥವಾ ಕೆಟ್ಟದರ ಪ್ರತೀಕವೆನಿಸುವ ಸ್ವಪ್ನಗಳೂ ಇವೆ. ಸ್ವಪ್ನದಲ್ಲಿ ದೇವರನ್ನು ನೋಡುವುದು ಒಳ್ಳೆಯದು. ಶುದ್ಧ ನೀರನ್ನು ಸ್ವಪ್ನದಲ್ಲಿ ನೋಡಿದರೆ ದೀರ್ಘಾಯುಷ್ಯ, ಕದಡಿದ ನೀರನ್ನು ನೋಡಿದರೆ ಅಲ್ಪಾಯುಷ್ಯ. ಹಲ್ಲು ಬಿದ್ದಂತೆ ಕಂಡರೆ ಮಿತ್ರನನ್ನು ಕಳೆಕೊಳ್ಳುವುದು.

## ತಾಯಿತಗಳು, ಯಂತ್ರಗಳು

ಗ್ರಹಪೀಡೆ ತೊಲಗಿಸಲು ತಾಯಿತ ಕಟ್ಟುತ್ತಾರೆ. ಪ್ರಿಯ ಜನರನ್ನು ವಶಮಾಡಿಕೊಳ್ಳಲೂ, ಬಾಲಗ್ರಹ ಪೀಡೆ ನಿವಾರಿಸಲೂ ಯಂತ್ರ ಕಟ್ಟುತ್ತಾರೆ. ಹುಲಿಯುಗುರು, ಹಂದಿಯ

ಎಲುವು, ಕರಡಿಯ ಕೂದಲು ಮುಂತಾದವುಗಳನ್ನು ಬೆಳ್ಳಿ, ಚಿನ್ನಗಳಲ್ಲಿ ಕಟ್ಟಿ ರಕ್ಷಾಬಂಧನವಾಗಿ ಉಪಯೋಗಿಸುತ್ತಾರೆ. ದೆವ್ವಗಳನ್ನು ಹೆದರಿಸುವ ಶಕ್ತಿ ಇವುಗಳಲ್ಲಿದೆಯೆಂದು ಕಲ್ಪನೆಯಿದೆ. ಅನಿಶ್ಚಿತ ಪರಿಸ್ಥಿತಿಗಳಲ್ಲಿ—ವಿಶೇಷತರದ ರೋಗಗಳಲ್ಲಿ, ಯುದ್ಧಗಳ ಸಂದರ್ಭದಲ್ಲಿ—ಮನಸ್ಸಿಗೆ ಸಮಾಧಾನ ತಂದು ಕೊಡಲು ಇವುಗಳಿಂದ ಉಪಯೋಗವಾಗುವಂತೆ ಕಾಣುತ್ತದೆ. ಈಗಲೂ ಯುರೋಪದ ಸೈನ್ಯಗಳಲ್ಲಿ ಭಾಗ್ಯದಾತ (mascot) ಪ್ರಾಣಿಗಳ ಉಪಯೋಗ ಬಹುವಾಗಿ ಪ್ರಚಾರದಲ್ಲಿದೆ. ಐಯರಿಶ್ ದಂಡಿನಲ್ಲಿ ತೋಳನಾಯಿ (wolfhound) ಬಹು ಮುಖ್ಯವಾದ ಪ್ರಾಣಿ. ಪಶುಪಕ್ಷಿ ಹಾಗೂ ಮನುಷ್ಯರೊಳಗೆ ಒಂದು ತರದ ಪ್ರೇತಸಂಬಂಧ (Spiritual relation) ಇದೆಯೆಂದು ಇಂದಿಗೂ ನಾಗರಿಕ ಜನರಲ್ಲಿಯೂ ನಂಬಿಕೆಯಿದೆ. ಜೀವಂತವಾದ ಕರೇಬೆಕ್ಕು, ಆಡು, ಮಂಗಗಳನ್ನು, ಕೆಲ ಸತ್ತ ಪ್ರಾಣಿ, ಅಥವಾ ಅವುಗಳ ಅವಶೇಷಗಳನ್ನೂ ಹಡಗು ಹಾಗೂ ಸೈನ್ಯಗಳಲ್ಲಿ ಭಾಗ್ಯಚಿಹ್ನ ಎಂಬಂತೆ ಉಪಯೋಗಿಸುತ್ತಾರೆ. ದ್ವಿತೀಯ ಮಹಾಯುದ್ಧದ ಗಂಡಾಂತರ ಸಮಯದಲ್ಲಿ ಈ ಪದ್ಧತಿ ಹೆಚ್ಚಾಗಿ ಕಂಡಿತು.

## ರತ್ನಗಳು

ರತ್ನಗಳಿಗೆ ನಿಸರ್ಗಾತೀತ ಶಕ್ತಿಯಿದೆಯೆಂದು ಪ್ರಾಚೀನ ಕಾಲದಲ್ಲಿ ಬಹು ಮಹತ್ವ ಕೊಡುತ್ತಿದ್ದರು. ಪ್ರತಿಫಲಿಸಿದ ಬೆಳಕಿನಿಂದ ಹೊಳೆಯದೆ ತಮ್ಮ ಸ್ವಂತ ಜೀವಾಳ ಶಕ್ತಿಯಿಂದ ಕಿರಣಗಳನ್ನು ಪಸರಿಸುವಂತೆ ಕಾಣುವ ರತ್ನಗಳು ನಿಸರ್ಗಾತೀತ ರಹಸ್ಯಶಕ್ತಿ ಹೊಂದಿವೆಯೆಂದು ಅವರು ತಿಳಿದಿದ್ದರಲ್ಲಿ

ಆಶ್ಚರ್ಯವಿಲ್ಲ. ಏಶಿಯಾದಲ್ಲಿ ರತ್ನಗಳ ಪ್ರಭಾವದ ಕಥೆ ಬಹಳ. ವಜ್ರ ಧರಿಸಿದ ಶ್ರೀಮಂತರಿಗೆ ಪ್ಲೇಗು ಬಡವರಿಗಾದಂತೆ ಬಾಧಿಸುವುದಿಲ್ಲವೆಂಬ ಕಲ್ಪನೆಯಿತ್ತು. ವಜ್ರಗಳಿಗೆ ಇತರ ವಜ್ರಗಳನ್ನು ಹಡೆಯುವ ಶಕ್ತಿಯಿದೆಯೆಂದು ಒಂದು ಉಲ್ಲೇಖವಿದೆ. ಬೇರೆಬೇರೆ ಪ್ರಾಣಿಗಳಲ್ಲಿ ರತ್ನ ದೊರೆವುದೆಂಬ ನಂಬಿಕೆಯಿತ್ತು. ಭಾರತದಲ್ಲಿ ಸರ್ಪಗಳ ತಲೆಯ ಮೇಲೆ ಅಮೂಲ್ಯ ರತ್ನಗಳಿವೆಯೆಂಬ ನಂಬಿಕೆ ಇನ್ನೂ ಇದೆ. ಮಾಣಿಕವನ್ನು ಧರಿಸಿದವನಿಗೆ ಅದು ಬಣ್ಣ ಬದಲಿಸಿ ಗಂಡಾಂತರ ಸೂಚಿಸುವದೆಂಬ ಕಲ್ಪನೆ ಮಧ್ಯಯುಗದಲ್ಲಿತ್ತು. ಅನೇಕ ರತ್ನಗಳಿಗೆ ಬೇರೆಬೇರೆ ರೋಗ ನಿವಾರಿಸುವ ಶಕ್ತಿ, ಹಾಗೂ ಇತರ ಮಾಟದ ಶಕ್ತಿಯಿದೆಯೆಂಬ ಕಲ್ಪನೆಯಿತ್ತು.

ಕೆಲವು ರತ್ನಗಳು ಕೆಲವರಿಗೆ ಒಳಿತನ್ನು ಮಾಡುವವು. ಕೆಲವರಿಗೆ ಅವುಗಳಿಂದ ಕೇಡೇ ಆಗುವದೆಂಬ ನಂಬಿಕೆಯುಂಟು. ವಿಶೇಷವಾಗಿ ಸಾರಾವಳಿ ನೋಡಿಯೇ ನೀಲರತ್ನ ಉಪಯೋಗಿಸುತ್ತಾರೆ. ಕೊಹಿನೂರ ರತ್ನ ಹೋದಲ್ಲೆಲ್ಲ ಅನರ್ಥವುಂಟಾಯಿತು. ನಂತರ ವಿಕ್ಟೋರಿಯಾ ರಾಣಿಯ ಕಿರೀಟದಲ್ಲಿ ಸೇರಿದಾಗ ಅಪಾಯರಹಿತವಾಯಿತು. ಆದ್ದರಿಂದ ಇಂದಿಗೂ ಅದು ರಾಣಿಯ ಕಿರೀಟದಲ್ಲಿಯೇ ಇರುತ್ತದೆ.

## ದೃಷ್ಟಿಶಕ್ತಿ

ಅನೇಕರ ಕಣ್ಣು ಕೆಟ್ಟದೆಂದು ಅನುಭವದಿಂದ ಜನರು ನಿರ್ಧರಿಸುತ್ತಾರೆ. ಕೆಟ್ಟ ಕಣ್ಣಿನವರು ಯಾವುದಾದರೂ ಹಣ್ಣು ತುಂಬಿದ ಮರವನ್ನು ನೋಡಿ ಎಷ್ಟು ಹಣ್ಣು ಬಿಟ್ಟಿವೆ ಎಂದರೆ ಸಾಕು, ಮರಹರಿದು ಅಥವಾ ಟೊಂಗೆ ಹರಿದು ಬೀಳುವದೆಂದೇ

ತಿಳಿಯಬೇಕು. ಮಹರ್ಷಿ ದೇವರಾತರ ತೆಂಗಿನ ತೋಟದಲ್ಲಿ ಬಹಳ ತೆಂಗಿನ ಕಾಯಿ ತುಂಬಿದ ಮರವನ್ನು ನೋಡಿ ಒಬ್ಬನು ಉದ್ಗಾರ ತೆಗೆದ ಕೂಡಲೆ ಕಾಯಿಗಳ ಗೊನೆ ಉದುರಿ ಬಿದ್ದು ದನ್ನು ಅವರು ಒಂದು ಸಂದರ್ಭದಲ್ಲಿ ತಿಳಿಸಿದ್ದಾರೆ. ಚಿಕ್ಕಮಕ್ಕಳು ಸುಂದರವಾಗಿದ್ದರೆ ದೃಷ್ಟಿ ತಾಗಬಾರದೆಂದು ದೃಷ್ಟಿ ಬೊಟ್ಟನ್ನಿಡುವುದು ಸುಪ್ರಸಿದ್ಧವಿದೆ. ಹಾಲು ಕರೆದುದನ್ನು ಕೆಟ್ಟ ಕಣ್ಣಿನವರು ನೋಡಿದರೆ ದನ ಹಾಲು ಕೊಡುವುದು ಕಡಿಮೆಯಾಗುತ್ತದೆ. ಆಗ ದೃಷ್ಟಿತೆಗೆಸಬೇಕಾಗುತ್ತದೆ. ಮೆಣಸಿನ ಕಾಯಿಯನ್ನು ಉಪ್ಪಿನೊಂದಿಗೆ ಬೆಂಕಿಯಲ್ಲಿ ಹಾಕುವುದು ದೃಷ್ಟಿ ತೆಗೆಯುವ ಒಂದು ವಿಧಾನ. ಬೆತ್ತಲೆಯಾಗಿ ಎಮ್ಮೆ ಅಥವಾ ಆಕಳುಗಳ ಮುಂದೆ ತಿರುಗಿದರೆ ದೃಷ್ಟಿದೋಷ ಪರಿಹಾರವಾಗುತ್ತದೆಂದು ಜನ ನಂಬಿ ಹಾಗೆಯೇ ಕ್ರಮ ಜರುಗಿಸುತ್ತಾರೆ.

ಕೆಟ್ಟ ಕಣ್ಣು, ಕೆಟ್ಟ ಬಾಯಿಗಳಿಗೆ ಮತ್ಸರವೇ ಕಾರಣ ಎಂದು ಹೇಳುತ್ತಾರೆ. ಕೆಲವು ಮುದುಕರಿಗೆ ನಿಮ್ಮ ವಯಸ್ಸೆಷ್ಟು ಎಂದು ಕೇಳಿದರೆ ಸಿಟ್ಟು ಬರುತ್ತದೆ. ಅವರ ವಯಸ್ಸು ತಿಳಿದರೆ ಮತ್ಸರ ಮಾಡುವವರಿಂದ ತಮ್ಮ ಆಯುಷ್ಯಕ್ಕೆ ಧಕ್ಕೆ ಎಂಬ ಕಲ್ಪನೆಯೇ ಅದಕ್ಕೆ ಕಾರಣ. ಅನೇಕ ಪಂಗಡಗಳವರು ಬೇರೆಯವರಿಗೆ ಕಾಣದಂತೆ ಊಟ ಮಾಡುತ್ತಾರೆ.

## ಕಾಡುಜನರ ಮೂಢನಂಬಿಕೆ ಕುರಿತು ಕಾಲರ್ಯಿಂಗರ ಅಭಿಪ್ರಾಯ

"ನಮ್ಮನ್ನು ಸಸ್ತನಿ ವರ್ಗದೊಡನೆ ಸೇರಿಸಿ ಹಾವು ಕಪ್ಪೆಗಳ ಅವಸ್ಥೆಗಳಿಗಿಂತ ಹಿಂದೆ ಸರಿದು ಮೊದಲಿನ ವಿಕಾಸದ ಹಂತಗಳ ಅನೇಕ ಅವಶೇಷಗಳನ್ನು ಮಾನವ ದೇಹವು ತೋರಿಸುವಂತೆಯೇ

ಮಾನವನ ಮನಸ್ಸು ಅದರ ಮೂಲಸ್ಥಿತಿಯನ್ನು ಶೋಧಿಸುತ್ತ ಹೊರಟರೆ ಅಸಂಖ್ಯ ಪ್ರಾಚೀನ ಗುರುತುಗಳನ್ನು ತೋರಿಸುತ್ತ ಬೆಳವಣಿಗೆ ಹೊಂದಿರುವುದು ಕಂಡುಬರುವುದು.

ಮುಪ್ಪಿನಿಂದ ಅಥವಾ ಮಾರಕವಾದ ರೋಗದಿಂದ ಜನರು ಸಾಯುವರೆಂಬುದು ನಮಗೆ ಸಮರ್ಪಕವಾಗಿ ತಿಳಿಯುವ ವಿಷಯ ವಾದರೂ ಅನಾಗರಿಕ ಮನುಷ್ಯನಿಗೆ ಹಾಗಿಲ್ಲ. ಮುಪ್ಪಿನವರು ವಯಸ್ಸಿನ ಮೂಲಕ ಸತ್ತರೆಂಬುದನ್ನು ಅವನು ನಂಬಲಾರನು. ಮತ್ತು ಹೆಚ್ಚು ವಯಸ್ಸಾದವರು ಜೀವಂತರಿದ್ದಾರೆಂದು ಅವನು ವಾದ ಮಾಡುವನು ರೋಗದಿಂದಲೂ ಯಾರೂ ಸಾಯುವು ದಿಲ್ಲ. ಯಾಕೆಂದರೆ ಅದೇ ರೋಗದಿಂದ ಗುಣವಾದವರಿದ್ದಾರೆ. ಅಥವಾ ರೋಗ ಬಾರದೇ ಇದ್ದವರಿದ್ದಾರೆ. ಇಲ್ಲಿ ಏನೋ ಮೋಡಿ ಮಾಡಿದ್ದಿರಬೇಕೆಂಬುದೇ ನಿಜವಾದ ವಿವರಣೆ. ಭೂತಪ್ರೇತ, ಮಾಟವೋ ಸತ್ತವನ ಕೊಲೆಗೆ ಕಾರಣವಾಗಿರ ಬೇಕು. ಅನೇಕ ಅನಾಗರಿಕ ಪಂಗಡಗಳವರು ಯುದ್ಧದಲ್ಲಿನ ಸಾವು ಮಾತ್ರ ಸಹಜವಾದದ್ದೆಂದು ತಿಳಿಯುವರು. ಇನ್ನಿತರ ಪಂಗಡಗಳವರು ಅದೂ ಅಸಹಜವೆಂದು ತಿಳಿಯುವರು. ಕಾರಣ ಯುದ್ಧದಲ್ಲಿ ಎಲ್ಲರೂ ಸಾಯುವದಿಲ್ಲ ಎಂದು. ಸಾವನ್ನು ಉಂಟುಮಾಡಿದ ವಿರೋಧಿ ಪಕ್ಷದವನು ಮಾಟಗಾರನಾಗಿರ ಬೇಕು; ಅಥವಾ ಮಾಟಮಾಡಿದ ಆಯುಧವನ್ನು ಉಪಯೋಗಿ ಸಿರಬೇಕು. ಕೆಲ ಸಂದರ್ಭಗಳಲ್ಲಿ ಈ ವಿಚಿತ್ರ ವಿಚಾರವು ಮತ್ತೂ ಹೆಚ್ಚಿನ ಪರಿಣಾಮಕಾರಿಯಾದ ರೂಪ ಧರಿಸಬಲ್ಲದು. ಉದಾಹರಣೆಗೆ, ಒಬ್ಬ ಯುರೋಪಿಯನ್ನನು ಹೊಡೆದು ಕೊಂದ ಮೊಸಳೆಯ ಹೊಟ್ಟೆಯಲ್ಲಿ ಎರಡು ಕಾಲಬಳೆಗಳು ದೊರೆತವು. ಅಲ್ಲಿಯ ಮೂಲ ನಿವಾಸಿಗಳು ಆ ಬಳೆಗಳು ಕೆಲ ಸಮಯದ

ಹಿಂದೆ ಮೊಸಳೆಯಿಂದ ನುಂಗಲ್ಪಟ್ಟ ಇಬ್ಬರು ಹೆಂಗಸರವೆಂದು ಗುರುತಿಸಿದರು. ಕೂಡಲೆ ಮೋಡಿಯ ಆರೋಪವನ್ನು ತಂದರು.

ಯಾರೋ ಒಬ್ಬ ಅಜ್ಞಾತ ಮಂತ್ರವಾದಿ ಆ ಮೊಸಳೆಯನ್ನು ಕರೆದು ಆ ಇಬ್ಬರು ಹೆಂಗಸರನ್ನು ತರಲು ಆಜ್ಞೆ ವಿಧಿಸಿದ್ದನೆಂದು ಸಹಜವಾದ ಘಟನೆಗೆ ವಿವರಣೆ ಹೇಳಿದರು. ಆ ಮೊಸಳೆ ಅವನ ಅಪ್ಪಣೆ ಪಾಲಿಸಿತು, ಅಷ್ಟೇ. ಯಾರಾದರೂ ವಿಧಿಸದಿದ್ದರೆ ಮೊಸಳೆಗಳು ಮನುಷ್ಯರನ್ನು ತಿನ್ನುವದಿಲ್ಲವೆಂದೂ ಆ ಮಂತ್ರಗಾರನಿಂದ ಬಳೆಗಳನ್ನು ಅದು ಬಹುಮಾನವಾಗಿ ಪಡೆಯಿತೆಂದೂ ಅವರು ಸಾಧಿಸಿದರು. ನೈಸರ್ಗಿಕವಾಗಿ ಕಾರಣಗಳನ್ನು ನಂಬದೆ ನಾವೂ ಅದೃಶ್ಯಶಕ್ತಿಗಳನ್ನೂ ಮಾಟಗಾರರನ್ನೂ ನಂಬುವವರಾದರೆ ಅವರ ಹೇಳಿಕೆ ಸಂಪೂರ್ಣ ಸಕಾರಣವೆಂದು ನಮಗೂ ಅನಿಸುತ್ತಿತ್ತು. ಇದಕ್ಕೆ ಅವರ ತರ್ಕಪೂರ್ವ ಮನಸ್ಥಿತಿಯ ಪೂರ್ವಸಿದ್ಧಾಂತವೇ ಕಾರಣ.

ಕಾಡು ಮಾನವನ ಮಾನಸಿಕ ಕ್ರಿಯೆ ನಮ್ಮದರಂತೆಯೇ. ಆದರೆ ಆತನ ಮೂಲಗ್ರಹಿಕೆಗಳು ಬೇರೆ. ಪ್ರತಿಯೊಂದಕ್ಕೂ ನೈಸರ್ಗಿಕವಾದ, ದೃಶ್ಯವಾದ ಕಾರಣವಿದೆ ಎಂಬುದು ಸಯುಕ್ತಿಕ ಸಿದ್ಧಾಂತವಾಗಿದೆ. ನಾವು ಆಕಸ್ಮಿಕ ಎನ್ನುವದಕ್ಕೂ ಅನಾಗರಿಕ ಮನುಷ್ಯ ವಿವರಣೆ ಕೇಳುತ್ತಾನೆ. ನಾವು ಆಕಸ್ಮಿಕ ಎನ್ನುವುದು ಅವನಿಗೆ ಅನಿಯಂತ್ರಿತ ಶಕ್ತಿಯ ಸಂಕೇತ. ಆದ್ದರಿಂದ ಮೊಸಳೆ ತಿಂದ ಹೆಂಗಸಿನ ಮರಣ ಆಕಸ್ಮಿಕವಲ್ಲ. ಇಬ್ಬರ ನಡುವೆ ಇರುವ ಒಬ್ಬ ಹೆಂಗಸನ್ನು ತಿನ್ನುವದೇ ಮೊಸಳೆಯ ಉದ್ದೇಶವಿತ್ತು. ಅದಕ್ಕೆ ಆ ಉದ್ದೇಶ ಇರುವುದಕ್ಕೆ ಕಾರಣವೇನು? ಸಾಮಾನ್ಯವಾಗಿ ಮೊಸಳೆಗಳು ಮನುಷ್ಯರನ್ನು

ನ್ನವದಿಲ್ಲ. ಈ ಮಾತು ಸಹರಾದಲ್ಲಿ ಮಳೆಯಿಲ್ಲ ಎಂಬ ಹೇಳಿಕೆಯಷ್ಟೇ ಸತ್ಯವಾಗಿದೆ. ಮೊಸಳೆಗಳು ನಿಜವಾಗ ಪುಕ್ಕ ಪ್ರಾಣಿಗಳು. ಸುಲಭವಾಗಿ ಹೆದರುತ್ತವೆ. ಅವುಗಳ ಸಂಖ್ಯೆಯನ್ನು ವಿಚಾರಿಸಿ ನೋಡಿದರೆ ಅವು ಆಶ್ಚರ್ಯವಾಗುವಷ್ಟು ಅತಿ ಕಡಿಮೆ ಜನರನ್ನು ತಿನ್ನುತ್ತವೆ ಆದ್ದರಿಂದ ಅವು ಮನುಷ್ಯರನ್ನು ತಿನ್ನುವದು ಅನಪೇಕ್ಷಿತ ಹಾಗೂ ಅಸ್ವಾಭಾವಿಕ. ಆದ್ದರಿಂದ ಅದಕ್ಕೆ ವಿವರಣೆ ಬೇಕು. ಯಾರು ಅದಕ್ಕೆ ಆಜ್ಞೆ ವಿಧಿಸಿದರು?

ಅನುಭವದ ಮೇಲೆಯೇ ಅನಾಗರಿಕ ಮನುಷ್ಯ ತನ್ನ ನಿರ್ಣಯಗಳನ್ನು ನಿಶ್ಚಿಸುತ್ತಾನೆ. ಅಸಾಧಾರಣ ಘಟನೆಗಳಿಗೆ ಆತ ಹೆದರುತ್ತಾನೆ. ಧೂಮಕೇತು, ಗ್ರಹಣ ಮುಂತಾದವು ಮುಂದೆ ನಡೆವ ಘಟನೆಗಳನ್ನು ತೋರಿಸುವ ಶಕುನ ಎಂದವನ ಅಭಿಪ್ರಾಯ. ರಾತ್ರಿ ಸಂಚಾರಿಯಾದ ಇರುವೆ ತಿನ್ನುವ ಪ್ರಾಣಿ ಹಗಲು ಬಂದರೆ ಅದೊಂದು ಅಸಾಧಾರಣ ಘಟನೆ. ಆತ ಅದನ್ನು ಕೊಂದು ಅದರ ಮಾಂಸ ತಿಂದು ಪರಿಹಾರ ಮಾಡಿಕೊಳ್ಳುತ್ತಾನೆ.

ಡರ್ಬಾನಿನ ವಿಶ್ವವಿದ್ಯಾಲಯದಲ್ಲಿ ಕಲಿತ ಒಬ್ಬ ಆಫ್ರಿಕನ್ನನು ಯುರೋಪಿಯನ್ ಮಿತ್ರನೊಡನೆ ಹೇಳಿದನಂತೆ "ಹೌದು, ಯುರೋಪಿಯನ್ ಡಾಕ್ಟರನು ದೇಶೀ ವೈದ್ಯನಿಗಿಂತ ಚೆನ್ನಾಗಿ ರೋಗ ಗುಣಪಡಿಸಬಲ್ಲನೆಂದು ನನಗೆ ಗೊತ್ತದೆ. ಆದರೆ ಯಾರು ರೋಗವನ್ನು ಉಂಟುಮಾಡಿದರೆಂಬುದನ್ನು ಆತ ಹೇಳಲಾರನು."

"ಜಗತ್ತು ಎಳೆಯದಿದ್ದಾಗ ಜನತೆಯ ಅನುಭವದ ಜ್ಞಾನ ಈ ಮೂಢನಂಬಿಕೆಗಳಲ್ಲಿ ಶೇಖರಿತವಾಗಿತ್ತು. ಅವು ಸುಳ್ಳು

ಎಂದು ನಮಗೆ ಇಂದು ಎನಿಸಿದರೂ ಆ ನಂಬಿಕೆಗಳ ಮೂಲ ಜೊತ್ಪಾದರೂ ಅವುಗಳಲ್ಲಿ ಅಡಕವಾದ ತರ್ಕಬದ್ಧತೆಯ ಗುಣವನ್ನು ಅಲ್ಲಗಳೆಯಲಾಗದು. ಆದಕ್ಕಾಗಿ ಅನಾಗರಿಕ ಜನರಿಗೆ ಸ್ವತಂತ್ರರಾಗಿರುವುದರ ಬದಲು ತಿರಸ್ಕಾರ ಹಾಗೂ ಅಪಹಾಸ್ಯ ಮಾಡುವುದು ನಮ್ಮ ಪದ್ಧತಿಯಾಗಿದೆ. ಕಾಡು ಜನರ ನಂಬುಗೆಗಳನ್ನು ಸತ್ಯಶೋಧನೆಯಲ್ಲಿ ಅಪರಿಹಾರ್ಯವಾಗಿದ್ದ ತಪ್ಪುಗಳೆಂದು ಸಹಾನುಭೂತಿಯಿಂದ ನೋಡಬೇಕು" ಎಂದು ಸರ್ ಜೇಮ್ಸ್ ಫ್ರೇಸರ್ ಹೇಳುತ್ತಾರೆ.

ಯುರೋಪಿಯನ್ನರಲ್ಲಿಯೂ ಜನಸಾಮಾನ್ಯರಲ್ಲಿ ಅಸಂಖ್ಯ ಮೂಢನಂಬಿಕೆಗಳು ಇಂದಿಗೂ ರೂಢವಾಗಿವೆ. ಕ್ರಿಶ್ಚನ್ ಧರ್ಮ ಸ್ಥಾಪನೆಯಾಗುವ ಪೂರ್ವದ ಪೇಗನ್ ಧರ್ಮದ ಅನೇಕ ನಂಬಿಕೆ, ಆಚರಣೆಗಳು ಜನರಲ್ಲಿನ ಆಳ ನಂಬುಗೆಯ ಮೂಲಕ ಕ್ರಿಶ್ಚನ್ ಧರ್ಮದ ಆಚರಣೆಗಳೊಡನೆ ಸೇರಿ ಹೋಗಿವೆ. ವಸಂತ ಕಾಲದಲ್ಲಿ ಚಳಿಗಾಲವನ್ನು ದೊಡ್ಡ ಬೆಂಕಿ ಮಾಡಿ ಸುಡುವ ಸಂಪ್ರದಾಯವಿದೆ. ಮರಗಳನ್ನು ಮುಟ್ಟಿ ಭವಿಷ್ಯದ ಅನಿಷ್ಟ ತಪ್ಪಿಸುವುದು ವಿಶಿಷ್ಟ ಮರಗಳು ದೇವತೆಗಳಿಗೆ ಪ್ರಿಯವಾಗಿದ್ದವೆಂಬ ಕಾರಣದಿಂದ. ವೇಲ್ಸದಲ್ಲಿ ಸಿಡಿಲು ಬಿದ್ದು ಸುಟ್ಟ ಓಕ್ ಮರ ಆಕಾಶ ದೇವತೆಗೆ ಪ್ರಿಯವಾದದ್ದರಿಂದ ಅದನ್ನು ಮುಟ್ಟಿದರೆ ಕಷ್ಟ ತಪ್ಪುವದೆಂಬ ನಂಬಿಕೆಯಿದೆ. ಮೇ ತಿಂಗಳಲ್ಲಿನ ಸ್ತಂಭದ ಪೂಜೆ ಇತ್ಯಾದಿಗಳು ವೃಕ್ಷಪೂಜೆಯ ಕುರುಹುಗಳೆಂದು ಫ್ರೇಸರರ ಹೇಳಿಕೆ. 'ಮೇ ವೃಕ್ಷ'ಕ್ಕೆ ದನ ಹಾಲು ಹೆಚ್ಚು ಕರೆವಂತೆ ಮಾಡುವ ಶಕ್ತಿಯಿದೆಯೆಂದು ಜರ್ಮನಿಯಲ್ಲಿ ನಂಬಿಕೆಯಿದೆ. ಹಂಗರಿಯ ಚರ್ಚುಗಳ ಸಂಪ್ರದಾಯದ ಎಪಿಫನಿ ಹಬ್ಬಗಳಲ್ಲಿ ಪುರೋಹಿತನನ್ನು ನೀರಿನಲ್ಲಿ ಒಗೆಯು

ವುದು ಮಳೆಯ ದೇವತೆಗೆ ಪ್ರಸನ್ನತೆ ಉಂಟುಮಾಡುವ ವಿಧಾನ ವಂತೆ. ಸ್ವಸ್ತಿಕ ಚಿಹ್ನೆ, ಆನೆಯ ಕೂದಲಿನ ಉಂಗುರ, ಕೆಲ ತರದ ಪ್ರಾಣಿಗಳು ಭಾಗ್ಯತರುವ ಶಕ್ತಿಯುಳ್ಳವೆಂದು ಯುರೋಪಿಯನ್ನರು ನಂಬುತ್ತಾರೆ. ಈಸ್ಟರ ಹಬ್ಬದಲ್ಲಿ ಬಣ್ಣದ ತತ್ತಿಗಳನ್ನು ಗುಪ್ತವಾಗಿ ಹುಗಿಯುವುದು, ಮೊಲದ ಪ್ರತಿಮೆ ಸ್ಥಾಪಿಸುವುದು ಇಂದಿಗೂ ಆಚರಣೆಯಲ್ಲಿವೆ ಅಮೇರಿಕನ್ನರು ಒಂದೇ ಬೆಂಕಿ ಕಡ್ಡಿಯಿಂದ ಮೂರು ಸಿಗರೇಟು ಹೊತ್ತಿಸುವುದಿಲ್ಲ, ಹದಿಮೂರು ಜನ ಊಟಕ್ಕೆ ಕೂಡುವದಿಲ್ಲ.

## ಹಗಲುಗನಸುಗಳು

ಮನುಷ್ಯನ ಹಗಲುಗನಸು ಇರುಳ ಕನಸುಗಳು ಅನೇಕ ಕಲ್ಪನಾ ಚಮತ್ಕೃತಿಯ ಕಥೆಗಳನ್ನು ರೂಪಿಸುತ್ತವೆ. “ ಎಲ್ಲ ರೂಢಿಗಳು, ಎಲ್ಲ ಸಂಪ್ರದಾಯಗಳು ಜನತೆಯ ಕಲ್ಪನೆಯಿಂದ ರೂಪುಗೊಳ್ಳುತ್ತವೆ. ” ಮನುಷ್ಯನ ಆಸೆಯ ಪೂರ್ತಿಯ ಕನಸು ಸ್ವರ್ಗಲೋಕದ ಚಿರಯೌವನ, ಅಮರತೆ ನಂದನವನಗಳನ್ನು ಸೃಷ್ಟಿಸಿರಬೇಕು ನಂಬಿ ನಟಿಸುವ ಎಳೆಯ ಹುಡುಗರ ಆಸೆಯು ಹಾಗೆ ಎಂದು ಕಾಡುಜನರ ಮಾಟದ ವಿವರಣೆಯನ್ನು ಕೊಡಬಹುದು. ವೈರಿಯನ್ನು ಕೊಲ್ಲುವ ಆಸೆಯಿಂದ ಆತನ ಗೊಂಬೆಗೆ ಬಾಣವನ್ನು ಚುಚ್ಚಿ ಆತನನ್ನು ಕೊಂದೆನೆಂಬ ಸಮಾಧಾನ ಹೊಂದುವುದು ನಂಬಿ ನಟಿಸುವುದರ ರೂಪವೇ ಆಗಿದೆ. ಮಳೆ ಬಾರದಿದ್ದಾಗ ಮಾಟಗಾರನು ಮಾಟ ಮಾಡಿದುದರಿಂದಲೇ ನಂತರ ಮಳೆ ಬಂತೆಂದು ಆತ ತಿಳಿಯುತ್ತಾನೆ. ಗ್ರಹಣಗಳಲ್ಲಿ ಸೂರ್ಯ ಚಂದ್ರರು ಪರಸ್ಪರ ನುಂಗುವುದನ್ನು ತಾನು ಗದ್ದಲ ಮಾಡುವುದರಿಂದ ತಡೆದೆನೆಂದು ತಿಳಿಯುವುದು ಅನಾಗರಿಕ

ಮನುಷ್ಯನ ನಟನೆಯೇ ಸರಿ.

ಸ್ವಪ್ನ, ನಿದ್ರೆ, ಸಮಾಧಿಯ ಸ್ಥಿತಿಗಳ ಕಾರಣವನ್ನು ಟ್ವಿ ಭಾಷೆಯನ್ನು ಮಾತನಾಡುವ ನಿಗ್ರೋನು ತನಗೆ ಎರಡನೆಯದೊಂದು ವ್ಯಕ್ತಿತ್ವವಿದೆಯೆಂದು ತಿಳಿಯುತ್ತಾನೆ. ಸ್ವಪ್ನಗಳಲ್ಲಿ ತಮ್ಮ ಬೇರೆ ಆತ್ಮಗಳು ರಾತ್ರಿ ಸಂಚಾರಕ್ಕೆ ಹೊರಡುವವೆಂದೂ ಅದೃಶ್ಯ ಆಕಾರದಿಂದ ಹೊರಟು ಅವು ಬೇರೆ ಪಿಲ್ಲಿ ( ಜೀವಂತ ಜನರ ಭೂತ )ಯನ್ನು ಸಂಧಿಸುವವೆಂದೂ ಲಿರಾಕಾನಿಯನ್ ಇಂಡಿಯನರು ತಿಳಿಯುತ್ತಾರೆ. ಸ್ವಪ್ನ ಬಿದ್ದಂತೆಯೇ ನಡೆದದ್ದೆಂದು ಅವರು ನಂಬುತ್ತಾರೆ. ಅನೇಕ ಅಸ್ಪಷ್ಟ, ಹಾಗೂ ವಿವರಣೆ ಕೊಡಲಾಗದ ಅವರ ಅನೇಕ ನಂಬಿಕೆಗಳಿಗೆ ಸ್ವಪ್ನವೇ ಮೂಲವಾಗಿದೆ. ಅನೇಕ ಅನಾಗರಿಕ ಪಂಗಡಗಳಲ್ಲಿ ಭೂತ ವೈದ್ಯರಾಗುವ ಮೊದಲು ಕೆಲ ವಿಶಿಷ್ಟ ತರದ ಸ್ವಪ್ನ ಬೀಳಬೇಕೆಂದು ಉಪವಾಸ ಉಳಿದು ಅನೇಕ ಕಷ್ಟ ಅನುಭವಿಸುತ್ತಾರೆ. "ರಾತ್ರಿಯ ಬಹಳಷ್ಟು ಸ್ವಪ್ನಗಳು ನಮ್ಮ ಆಶಾಪೂರ್ತಿಯ ಚಿತ್ರದ ಪರಿಣಾಮಗಳೆಂದು ಫ್ರಾಯ್ಡ್ ತೋರಿಸಿದ್ದಾನೆ. ಹಗಲುಗನಸುಗಳು ಹಾಗೆಯೇ ಎಂದು ಅಷ್ಟೇ ಸತ್ಯವಾಗಿ ಹೇಳಿದ್ದಾನೆ. ನಾವು ನಂಬಿಕೆಗಳೆಂದು ಕರೆಯುವ ಹಗಲುಗನಸುಗಳನ್ನು ಅವುಗಳೊಡನೆಯೇ ಸೇರಿಸಬೇಕಾಗಿತ್ತು" ಎಂದು ಬರ್ಟ್ರಾಂಡ್ ರಸೆಲ್ ಹೇಳುತ್ತಾರೆ. ತನ್ನ ಧರ್ಮ, ತನ್ನ ಕುಲ, ತನ್ನ ರಾಜಕೀಯ ಪಕ್ಷ, ತನ್ನ ಸಾಮಾಜಿಕ ಆಚಾರ ವಿಚಾರಗಳು ಇತರರ ನಂಬಿಕೆಗಳಿಗಿಂತ ಶ್ರೇಷ್ಠ ಎಂದು ತಿಳಿಯುವ ಪ್ರತಿಯೊಬ್ಬನೂ ಕೆಲಮಟ್ಟಿನ ಹಗಲುಗನಸು ಅರ್ಥಾತ್ ಮೂಢನಂಬಿಕೆಗಳಿಗೆ ಒಳಗಾಗಿದ್ದಾನೆಂದೂ ಅವರು ಹೇಳುತ್ತಾರೆ. ಅನೇಕ ಪೌರಾಣಿಕ ಕಥೆಗಳು, ಯಕ್ಷಿಣಿಯ ಕಥೆಗಳು ಮಾನವನ

ಅತೃಪ್ತ ಆಕಾಂಕ್ಷೆಗಳ ರೂಪಾಂತರಗಳೆಂದು ಮನೋವಿಜ್ಞಾನಿಗಳ ಅಭಿಪ್ರಾಯ.

## ಭಯದಿಂದ ದೆವ್ವ, ಭೂತಗಳ ಸೃಷ್ಟಿ

ರಾತ್ರಿಯಲ್ಲಿ ಮರಗಳ ನೆರಳು, ಓಡಾಡುವ ಮನುಷ್ಯ ಹಾಗೂ ಪ್ರಾಣಿಗಳ ನೆರಳನ್ನು ನೋಡಿ ಭೀತನಾದ ಮಾನವನು ರಾಕ್ಷಸ, ಭೂತಗಳ ವಿಕಾರ ರೂಪಗಳನ್ನು ಕಲ್ಪಿಸಿರಬೇಕು. ರಾತ್ರಿಯ ಭೀಕರ ಸ್ವಪ್ನಗಳು ಆ ನಂಬಿಕೆಗಳನ್ನು ಹೆಚ್ಚು ದೃಢವಾಗಿ ಮಾಡಿರಬೇಕು. ಗ್ರೀಸದೇಶದ ಸಾಹಿತ್ಯದಲ್ಲಿ ಭೂತಗಳು ನೆರಳಿನಂತೆ ಇರುವವೆಂದು ವರ್ಣಿತವಾದುದನ್ನು ಸ್ಮರಿಸಬಹುದು. ಮರಣದ ಹೆದರಿಕೆ ಭೂತದ ಭಾವನೆಗೆ ಪುಟ ಕೊಟ್ಟಿರಬೇಕು. ಪ್ರಾಣಿಗಳ ಹೆದರಿಕೆ ಅನೇಕ ಕಾಡುಪ್ರಾಣಿಗಳನ್ನು ಪೂಜಿಸಲು ಮಾನವನನ್ನು ಪ್ರೇರೇಪಿಸಿರಬೇಕು. ಹುಲಿರಾಯ, ಸರ್ಪ ಮುಂತಾದವುಗಳ ಪೂಜೆಗೆ ಅವುಗಳನ್ನು ಕುರಿತ ಭಯವೇ ಕಾರಣವಾಗಿರಬೇಕು.

ಕೆಲ ಸನ್ನಿವೇಶಗಳು ಭಯವನ್ನು ಮತ್ತೂ ಹೆಚ್ಚು ಮಾಡುತ್ತವೆ. ಜನಸಂಖ್ಯೆ ಕಡಿಮೆ ಇರುವ ಜಾಗಗಳಲ್ಲಿಯೇ ಭೂತ-ದೆವ್ವಗಳ ಭಯ ಹೆಚ್ಚು. ಅನೇಕ ವರ್ಷ ಮನುಷ್ಯರ ವಸತಿಯಿಲ್ಲದ ಮನೆಯಲ್ಲಿ ದೆವ್ವಗಳು ಬಂದು ಆಶ್ರಯ ಪಡೆಯುವವೆಂದು ಕಲ್ಪಿಸಿಯಿದೆ. ಅಲ್ಲಿ ರಾತ್ರಿ ಹೊತ್ತು ಅನೇಕ ತರದ ಒದರಾಟ ಚೀರಾಟಗಳು ಕೇಳುವವೆಂದು ಹೇಳುತ್ತಾರೆ. ಜನಸಂಖ್ಯೆ ಹೆಚ್ಚಾದರೆ ದೆವ್ವಗಳು ಆ ಸ್ಥಳವನ್ನು ಬಿಟ್ಟು ಹೋಗುವವೆಂದು ಕೆಲವರೆನ್ನುವರು. ಮನುಷ್ಯನ ಅಜ್ಞಾತದ ಭಯವೇ ದೆವ್ವ-ಭೂತಗಳ ಕಾಟಕ್ಕೆ ಕಾರಣವಾಗಿರಬೇಕು. ದೃಷ್ಟಿಯಂತೆ

ಸೃಷ್ಟಿ ಎಂಬ ಮಾತು ಈ ವಿಷಯದಲ್ಲಿಯೂ ನಿಜ. ನಮ್ಮ ಹಿರಿಯರೊಬ್ಬರು ಹೆಡತಲೆಯಲ್ಲಿ ದೆವ್ವವಿದೆ ಎನ್ನುತ್ತಿದ್ದರು. ದೆವ್ವಗಳು ಇಲ್ಲದಿದ್ದರೂ ನಮ್ಮ ತಲೆಯಲ್ಲಿಯ ದೆವ್ವದ ಹೆದರಿಕೆಯೇ ಅವನ್ನು ಕಾಣುವಂತೆ ಅನ್ಯಗಳಿಗೆ ಹೆದರುವಂತೆ ಮಾಡುತ್ತದೆ ಎನ್ನುತ್ತಿದ್ದರು. ದೆವ್ವವನ್ನು ಪ್ರತ್ಯಕ್ಷ ನೋಡಿದೆವೆಂದು ಹೇಳುವವರಿದ್ದಾರೆ. ಬಿಳೇ ಸೀರೆಯುಟ್ಟು ಅಪರಾತ್ರಿಯಲ್ಲಿ ಅಳುವ ದೆವ್ವವನ್ನೂ ನೋಡಿದವರಿದ್ದಾರೆ. ದೊಡ್ಡ ಕೋಣ ಓಡಿ ಬಂದು ಕೆರೆಯಲ್ಲಿ ಹಾರಿದಂತೆ ಶಬ್ದ ಕೇಳಿ ಮೂರ್ಛೆ ಹೊಂದಿದವರಿದ್ದಾರೆ. ಕತ್ತನ್ನು ನೂಕಿದ ಹೆದರಿಕೆಯಿಂದ ಪ್ರಾಣ ಬಿಟ್ಟವರ ಉದಾಹರಣೆಗಳಿವೆ. ಅವರಿಗೆ ಮೃತ್ಯು ಹೊಡೆಯಿತೆಂದು ಭಾವಿಕರು ವಿವರಣೆ ಕೊಡುತ್ತಾರೆ. ಹೆದರಿದ್ದರಿಂದ ಜ್ವರಬಂದು ನಂತರ ಸತ್ತವರ ಉದಾಹರಣೆಗಳೂ ಇವೆ. ದೆವ್ವ ಭೂತ ಇಲ್ಲದಿದ್ದರೂ ಅವುಗಳ ಹೆದರಿಕೆಯ ಪರಿಣಾಮ ತೀರ ನಿಜವಾದ ಸಂಗತಿ. ರಾಬರ್ಟ್ ಬ್ಲೂಮ್ ಫೀಲ್ಡ್ ಬರೆದ "ಫೆಕನ್ ಹೇಮ್ ಭೂತ" ಎಂಬ ಕವನದಲ್ಲಿ ರಾತ್ರಿ ಹೊತ್ತಿನಲ್ಲಿ ಒಬ್ಬ ಮುದುಕಿ ಮನೆಗೆ ಮರಳುವಾಗ ಭೂತದ ಆಕೃತಿ ಕಂಡು ಅದು ಬರುವ ಶಬ್ದವನ್ನೂ ಕೇಳುತ್ತ ಬಂದವಳು ಮನೆ ಬಾಗಿಲಿನಲ್ಲಿ ಮೂರ್ಛೆ ಹೊಂದಿ ಬೀಳುತ್ತಾಳೆ. ಜನರು ಏನಾಯಿತೆಂದು ನೋಡಲು ಒಂದು ಕತ್ತೆಯ ಮರಿ ಆಕಡೆ ಬರುವುದನ್ನು ನೋಡಿ ಭೂತವೆಂದು ಆಕೆ ಹೆದರಿದ್ದು ಸ್ಪಷ್ಟವಾಯಿತು.

ಪ್ರಾಮಾಣಿಕವಾಗಿ ಭೂತವನ್ನು ನಂಬುವವರಿರುವಂತೆಯೇ ತಮ್ಮ ಲಾಭಕ್ಕಾಗಿ, ಉದ್ದೇಶಸಾಧನೆಗಾಗಿ ದೆವ್ವ ಭೂತಗಳನ್ನು ಸೃಷ್ಟಿಸುವವರೂ ಕಂಡುಬರುತ್ತಾರೆ. ಜನರ ನಂಬಿಕೆ ಅಂಥ ತಂತ್ರ ಯಶಸ್ವಿಯಾಗಲು ಸಹಾಯ ಮಾಡುತ್ತದೆ.

ಆಲ್ಡಸ್ ಹಕ್ಸಲಿಯವರು "ಲೋಡನ್ನದ ದೆವ್ವಗಳು" ಎಂಬ ಅತ್ಯುತ್ತಮ ಕಾದಂಬರಿಯಲ್ಲಿ ಗ್ರೆಂಡಿಯರ್ ಎಂಬ ಪಾದ್ರಿಯ ಮೇಲೆ ಒಂದಲ್ಲೊಂದು ಕಾರಣದಿಂದ ದ್ವೇಷವುಂಟಾದ ಪೂಜಾ ರಿಣಿಯರು, ಹಾಗೂ ಇತರರು ಆತ ಮಾಟಗಾರನಾಗಿ ಲೋಡ ನ್ನದ ಚರ್ಚಿನ ಪೂಜಾರಿಣಿಯರ ಮೇಲೆ ದೆವ್ವಮಾಡಿ ಹಾಕಿದ ನೆಂಬ ಆರೋಪವನ್ನು ಸಿದ್ಧಮಾಡಿ ಆತನನ್ನು ಚಿತ್ರಹಿಂಸೆ ಯಿಂದ ಜೀವಂತ ಸುಡಿಸಿದ, ೧೭ನೇ ಶತಮಾನದಲ್ಲಿ ನಡೆದ, ಘಟನೆಗಳನ್ನು ವರ್ಣಿಸಿದ್ದಾರೆ. ನಮ್ಮ ಊರಿನಲ್ಲಿ ಕೆಲ ವರ್ಷಗಳ ಹಿಂದೆ ಮಾತನಾಡುವ ಚೌಡಿಯ ಪ್ರಕರಣ ನಡೆಯಿತು. ಆ ಆಶ್ಚರ್ಯದ ವಿಷಯವನ್ನು ನೋಡುವುದಕ್ಕಾಗಿ ಬೇರೆ ಬೇರೆ ಕಡೆಗಳಿಂದ ಬಂದವರಿಂದ ಬಂದ ಕಾಣಿಕೆಯ ಹಣದ ಆಸ ಯಿಂದ ಈ ವೇಷ ತಿಂಗಳುಗಟ್ಟಲೆ ನಡೆಯುತ್ತಲಿತ್ತು. ರಾತ್ರಿ ಯಲ್ಲಿ ನಡೆಯುವ ಚೌಡಿಯ ಸಾಹಸವನ್ನು ಒಬ್ಬರು ಟಾರ್ಚಿನ ಸಹಾಯದಿಂದ ಬಯಲಿಗೆ ತಂದರು. ಆ ಚೌಡಿ ಒಬ್ಬ ಪ್ರಾಯದ ಹೆಣ್ಣುಮಗಳಾಗಿದ್ದಳು.

## ವಿಕೃತ ರೀತಿಗಳಿಂದ ಹೆದರಿಕೆ

ಸಾಮಾನ್ಯವಾಗಿ ರೋಗಗಳಿಗೆಲ್ಲ ದೆವ್ವ ಭೂತಗಳ ಪೀಡೆ ಯನ್ನು ಆರೋಪಿಸುತ್ತಿದ್ದರೂ ಮೂಲದಲ್ಲಿ ಮುಖ್ಯವಾಗಿ ಕೆಲ ವಿಕಾರಗಳನ್ನುಂಟುಮಾಡುವ ರೋಗಗಳಿಗೆ ದೆವ್ವದ ಕಲ್ಪನೆ ಯನ್ನು ಕೊಟ್ಟಿದ್ದಿರಬೇಕು. ಅಪಸ್ಮಾರದಲ್ಲಿ ವಿಕಾರವಾಗಿ ಕೂಗಿ ಒಮ್ಮೆಲೆ ಎಚ್ಚರತಪ್ಪಿ ಬಿದ್ದು ಅವಯವಗಳನ್ನು ಬಡಿ ಯುವದು ಅಶಿಕ್ಷಿತ ಮಾನವನಿಗೆ ತುಂಬ ಹೆದರಿಕೆಯನ್ನು ಉಂಟು ಮಾಡಿದ್ದಿರಬೇಕು. ಹಾಗೆಯೇ ಹಿಸ್ಟೀರಿಯಾ ಮತ್ತು

ಇತರ ಮನೋವಿಕಾರಗಳಲ್ಲಿ ಸಾಮಾನ್ಯವಾಗಿ ದೈಹಿಕ ಆರೋಗ್ಯ ವಿಶೇಷ ಹೆಚ್ಚುಕಡಿಮೆಯಾಗಿದ್ದರೂ ತೋರುವ ವಿಕಾರ ಚೇಷ್ಟೆ, ವಿಚಿತ್ರವಿಕಾರದ ಕೂಗುಗಳೂ ಭೂತದ ಹೆದರಿಕೆಯನ್ನು ಸ್ವಾಭಾವಿಕವಾಗಿ ಹೆಚ್ಚು ಮಾಡಿದ್ದಿರಬೇಕು. ಸಿಡಿಲಿನ ಶಬ್ದ ಅಶಕ್ತ ರೋಗಿಗಳನ್ನು ಹೆದರಿಕೆಯಿಂದ ಸಾಯಿಸುವಂತೆ ರಾತ್ರಿಯಲ್ಲಿ ವಿಕಾರವಾಗಿ ಕೂಗುವ ಬಳ್ಳುವಿನ ಸ್ವರವೂ ಸಾವ ಭೀತಿಯನ್ನು ರೋಗಿಗಳಲ್ಲಿ ಉಂಟುಮಾಡಿದ್ದಿರಬೇಕು. ಬಳ್ಳು ಕೂಗಿದ ಕಾಲಕ್ಕೆ ಆದ ಮರಣಗಳು ಅದರ ಕೂಗಿಗೂ ಮರಣಕ್ಕೂ ಗಂಟುಹಾಕಿರಬೇಕು. ಅಪರಿಚಿತ ಒಳ್ಳುವಿನ ಸ್ವರದ ಹೆದರಿಕೆ ಪರಿಚಿತ ನಾಯಿಗಳು ಕೂಗಿದುದರಿಂದ ಶಮನವಾಗುವದುಂಟು.

ಕೆಲ ಅಪೂರ್ವ ಸಂಗತಿಗಳು ವಿಶೇಷಾರ್ಥದ ನಿಮಿತ್ತಗಳಾಗುತ್ತವೆ. ಧೂಮಕೇತು, ಗ್ರಹಣಗಳು ಅಪಾಯಸೂಚಕಗಳು. ಅದರಂತೆ ಕಂಕಣಾಕೃತಿಯ, ಖಗ್ರಾಸ ಸೂರ್ಯಗ್ರಹಣಗಳಲ್ಲಿ ಹಗಲಿನಲ್ಲಿ ನಕ್ಷತ್ರ ಕಂಡರೆ ಅದು ಆಗ ಹುಟ್ಟುವವರಿಂದಾಗುವ ಅನಿಷ್ಟ ಸೂಚಕ. ದುರ್ಯೋಧನನ ಹುಟ್ಟಿನ ಕಾಲಕ್ಕಾಗ ಕವಿಗಳ ಉತ್ಪಾತ ಸೂಚನೆಯ ವರ್ಣನೆಗಳನ್ನು ನೋಡಬೇಕು.

ನರಿಯ ಮೋರೆಯನ್ನು ನೋಡಿ ಅದರ ಬಾಲವನ್ನು ನೋಡದಿರುವುದು ಅಪೂರ್ವ. ಪುಕ್ಕಲು ಪ್ರಾಣಿಯಾದ ನರಿ ಯಾರನ್ನಾದರೂ ಕಂಡಕೂಡಲೆ ಬೆನ್ನು ತಿರುವಿ ಓಡಹತ್ತುತ್ತದೆ. ಆಗ ಅದರ ಬಾಲ ದೃಷ್ಟಿಗೆ ಬೀಳುತ್ತದೆ. ಒಮ್ಮೊಮ್ಮೆ ಅದರ ಬಾಲ ನೋಡದೆ ಮೋರೆಯನ್ನು ಮಾತ್ರ ನೋಡಲು ಸಾಧ್ಯವಾದರೆ ಆದಿನ ಅಪೂರ್ವ ಲಾಭವೆಂದು ನಮ್ಮ ಜನರ ಕಲ್ಪನೆ. ಅದೃಷ್ಟ ಒದಗಿ ಬಂದರೆ ನರಿ ಮೋರೆ ನೋಡಿದ್ದೆ

ಎನ್ನುವವರುಂಟು. ಅನೇಕ ಆಫ್ರಿಕನ್ ಪಂಗಡಗಳವರು ಅವಳಿ ಮಕ್ಕಳ ಜನ್ಮ ನೈಸರ್ಗಿಕವಲ್ಲ ಎಂದು ತಿಳಿಯುತ್ತಾರೆ. ಒಂದು ಮಗು ಗಂಡನದಲ್ಲ, ಭೂತನದೇ ಎಂದು ಅವರ ಸಿದ್ಧಾಂತ. ಆಫ್ರಿಕದ ಕೆಲ ಭಾಗಗಳಲ್ಲಿ ಅವಳಿ ಮಕ್ಕಳು ಹುಟ್ಟಿದಕೂಡಲೆ ಕೊಂದುಬಿಡುತ್ತಿದ್ದರು. ಅದು ತಾಯಿಯೇ ಮಾಡಬೇಕಾದ ಕೆಲಸವಾಗಿತ್ತು.

## ಕಾಕತಾಳೀಯ

ಕಾರ್ಯಕಾರಣ ಸಂಬಂಧವಿಲ್ಲದೆ ಅನೇಕ ಘಟನೆಗಳು ಏಕ ಕಾಲಕ್ಕೇ ಸಂಭವಿಸಿದರೆ ಅವುಗಳಲ್ಲಿಯೇ ಒಂದು ತರದ ಸಂಬಂಧವನ್ನು ಅನಾಗರಿಕ ಅಥವಾ ಭಾವಿಕ ವ್ಯಕ್ತಿ ಕಾಣುತ್ತಾನೆ. ಒಬ್ಬ ರೋಗಿ ಮೂರ್ಛೆ ಹೋದಾಗ ಒಂದು ಹಲ್ಲಿ ನೀರಿನ ಕೊಡವನ್ನು ಹೊಕ್ಕಿತು. ಆತನ ಆತ್ಮವೇ ಹಲ್ಲಿಯ ರೂಪದಿಂದ ಅಲ್ಲಿ ಹೊಕ್ಕಿತೆಂದೂ ಆತ ಸತ್ತನೆಂದೂ ಕಾಡುಜನ ತಿಳಿದರು. ಪುನಃ ಅದು ನೀರಿನ ಕೊಡದಿಂದ ಆ ವ್ಯಕ್ತಿಯ ಹತ್ತಿರ ಬಂತು. ಆ ರೋಗಿಗೆ ಎಚ್ಚರಾಯಿತು. ಆತನ ಪ್ರಾಣ ಪುನಃ ಆತನ ಶರೀರವನ್ನು ಸೇರಿತೆಂದು ಅವರು ತಿಳಿದರು. ಒಬ್ಬನು ಯಾವುದೋ ಕೆಲಸಕ್ಕೆ ಹೊರಟಿರುತ್ತಾನೆ. ಮಧ್ಯದಲ್ಲಿ ಯಾರಾದರೂ ಸಂಭಾಷಣೆಯಲ್ಲಿ ತಮಗೆ ಸಂಬಂಧಿಸಿ ಅದು ಒಳ್ಳೆಯದು, ಅಥವಾ ಕೆಟ್ಟದು, ಆಗುವದು ಅಥವಾ ಇಲ್ಲ ಹೀಗೇನಾದರೂ ಅಂದರೆ ಈತ ಅದು ತನ್ನ ಉದ್ದೇಶದ ಫಲವನ್ನೂ ತಿಳಿಸುತ್ತವೆಂದು ತಿಳಿಯುತ್ತಾನೆ. ಇದಕ್ಕೆ ಸಾದೃಷ್ಟ ಎನ್ನುತ್ತಾರೆ. ಧೂಮಕೇತು ಕಂಡಾಗ ಯುದ್ಧವಾದರೆ, ಯಾವನಾದರೂ ಪ್ರಸಿದ್ಧ ಪುರುಷ ಸತ್ತರೆ ಅದು ಧೂಮಕೇತುವಿನ ಪರಿಣಾಮ

ಎಂದು ತಿಳಿಯುತ್ತಾರೆ. ಎಲ್ಲಿ ಪ್ರಸಿದ್ಧ ಪುರುಷರ ಸಾವನ್ನು ಧೂಮಕೇತು ಪ್ರತಿಸಲ ಬಂದು ಯಾಕೆ ಸೂಚಿಸುವದಿಲ್ಲ ಎಂದು ಯಾರೂ ಅಷ್ಟು ವಿಚಾರಿಸುವುದಿಲ್ಲ. ಧೂಮಕೇತು ಬಂದ ವರ್ಷ ಏಳನೇ ಎಡ್ವರ್ಡರು ತೀರಿದ್ದರು. ಸೀಸರನು ಸಾಯುವಮೊದಲು ಧೂಮಕೇತು ಬಂದಿತ್ತೆಂದು ಶೇಕ್ಸ್‌ಪಿಯರನ "ಜೂಲಿಯಸ್ ಸೀಸರ್" ನಾಟಕದಿಂದ ತಿಳಿಯುತ್ತದೆ. ವಲ್ಲಭಭಾಯಿ ಪಟೇಲರು ತೀರಿದ ವರ್ಷವೂ ಧೂಮಕೇತು ಕಂಡಿತ್ತು. ಧೂಮಕೇತು ಅನಿಷ್ಟ ಎಂದು ಸಿದ್ಧಮಾಡಲು ಇಂಥ ದೃಷ್ಟಾಂತಗಳು ವಿಜ್ಞಾನವನ್ನು ಅಲಕ್ಷಿಸುವವರಿಗೆ ಸಾಕಾಗುತ್ತವೆ. ಬಹಳಷ್ಟು ಶಕುನಗಳು ಇಂಥ ಕಾಕತಾಲೀಯ ಘಟನೆಗಳನ್ನೇ ಅವಲಂಬಿಸಿ ಪ್ರಚಾರಹೊಂದುತ್ತವೆ. ಒಬ್ಬನು ಒಂದು ಹೊಲವನ್ನು ಕೊಳ್ಳುತ್ತಾನೆ. ನಂತರ ಅವನಿಗೆ ಅನೇಕ ವಿಷಯಗಳಲ್ಲಿ ಹಾನಿಯಾಗುತ್ತದೆ. ಆ ಹೊಲ ಕೊಂಡಿದ್ದರಿಂದಲೇ ಅನಿಷ್ಟ ಪರಿಣಾಮಗಳು ಸಂಭವಿಸಿದವೆಂದು ಅವನ ತರ್ಕವಾಗುತ್ತದೆ. ಹೆಂಗಸರ ಕಾಲ್ಗುಣದ ವಿಷಯವೂ ಅನುಭವದಿಂದ ನಿರ್ಣಯವಾಗುತ್ತದೆ. ತಮ್ಮ ಸಂಪತ್ತನ್ನು ಕಳೆದುಕೊಂಡವರೊಬ್ಬರು ತಮ್ಮ ಮೊದಲನೆ ಹೆಂಡತಿ ತೀರಲು ಎರಡನೇ ವಿವಾಹವಾದರು. ನಂತರ ಅವರಿಗೆ ಹಿಡಿದ ಕೆಲಸದಲ್ಲಿ ಜಯವಾಗುತ್ತ ಬತ್ತಿಹೋದ ನದಿಗೆ ಮಹಾಪೂರ ಬಂದಂತೆ ಸಂಪತ್ತು ಹೆಚ್ಚುತ್ತ ಬಂತು. "ಈಕೆ ಬಡವರ ಮನೆಯವಳಾದರೂ ಇವಳನ್ನು ಕೈಹಿಡಿದ ಮೇಲೆಯೇ ನನಗೆ ಇಷ್ಟು ಭಾಗ್ಯ ಬಂದದ್ದು" ಎಂದವರು ಹೇಳುವದುಂಟು. ಆದ್ದರಿಂದಲೇ ಪ್ರತಿದಿನ ಮುಂಜಾನೆ ಎದ್ದಕೂಡಲೆ (ಅಥವಾ ಏಳುವಾಗಲೇ) ಹೆಂಡತಿಯ ಮುಖದರ್ಶನವನ್ನು ಮಾಡಿಕೊಂಡು ಅವರು ಇತರ ಕೆಲಸಗಳನ್ನು ಕೈಕೊಳ್ಳುತ್ತಾರೆ. ಒಂದೇ

ಮುಹೂರ್ತದಲ್ಲಿ ಹುಟ್ಟಿದವರ ಜೀವನ ಸಮಾನ ಪರಿಣಾಮ ಹೊಂದುತ್ತದೆ ಎಂಬ ನಂಬಿಕೆ ಜ್ಯೋತಿಷ ಶಾಸ್ತ್ರದಲ್ಲಿದೆ. ಅನೇಕ ವ್ಯಕ್ತಿಗಳ ಜನ್ಮಮುಹೂರ್ತ, ಅವರ ಜೀವನದ ತಾಳಮೇಳದ ಆಧಾರದಿಂದ ರಚಿತವಾದ ಅನುಭವದ ಶಾಸ್ತ್ರ ಅದು. ಆದರೆ ಒಂದೇ ಮುಹೂರ್ತದಲ್ಲಿ ಹುಟ್ಟಿದ ಅವಳಿಮಕ್ಕಳ ಜೀವನ ಏಕೆ ಬೇರೆಬೇರೆ ತರದ್ದಾಗುತ್ತದೆಂದು ಸೇಂಟ್ ಜಾನ್ ಕೇಳಿದ್ದನು. ನಮ್ಮ ಸಂಬಂಧಿಕರೊಬ್ಬರ ಮದುವೆಗೆ ಮೊದಲು ಹಿರಿಯ ಜ್ಯೋತಿಷಿಗಳೊಬ್ಬರು ನಿಶ್ಚಯವಾಗಿದ್ದ ಆ ಹೆಣ್ಣನ್ನು ಮದುವೆ ಯಾದರೆ ಸಂತಾನಲಾಭವಿಲ್ಲವೆಂದು ಭವಿಷ್ಯ ಹೇಳಿದ್ದರು. ಆದರೆ ಆ ಭವಿಷ್ಯ ಸರಿಯಾಗಲಿಲ್ಲ. ಜನ್ಮ ಮುಹೂರ್ತ ಸರಿ ಯಾಗಿದ್ದರೆ ಭವಿಷ್ಯ ಸಂಪೂರ್ಣ ಸತ್ಯವಾಗುವುದೆಂದೂ ಕೆಲ ವರು ಹೇಳುತ್ತಾರೆ. ಇತಿಹಾಸದ ಪುನರಾವೃತ್ತಿಯಾಗುತ್ತದೆ ಎಂಬ ನಂಬಿಕೆಯೂ ಇದೆ. ಆದರೆ ಇವೆಲ್ಲ ಅನುಭವ ದಿಂದ ಪ್ರಚಾರದಲ್ಲಿ ತಂದ ಕೆಲ ಗಾದೆಗಳ ಹಾಗೆ. ಕಷ್ಟ ಒಂಟಿಯಾಗಿ ಬರುವದಿಲ್ಲ ಎಂಬ ಗಾದೆ ಎಲ್ಲ ಸಂದರ್ಭ ಗಳಲ್ಲಿ ಸತ್ಯವಲ್ಲ. ಜ್ಯೋತಿಷವೂ ವೈಜ್ಞಾನಿಕ ಸತ್ಯವಲ್ಲ.

## ಜ್ಯೋತಿಷ್ಯದಲ್ಲಿ ನಂಬಿಕೆ

ಹದಿನಾರನೇ ಶತಕದ ಕಾಲದಲ್ಲಿ ಯುರೋಪಿನಲ್ಲಿ ಜ್ಯೋತಿ ಷ್ಯಕ್ಕೆ ಬಹಳ ಗೌರವವಿತ್ತು. ಅದು ವೇದಶಾಸ್ತ್ರ (Theology) ದೊಡನೆ ಸಂಬಂಧ ಹೊಂದಲು ಯೋಗ್ಯವಾದದ್ದೆಂದು ತಿಳಿಯು ತ್ತಿದ್ದರು. ಖಗೋಲಗಳು ಜೀವಂತವಿರುವ ಅಭಿಪ್ರಾಯ ಅದಕ್ಕೆ ಬೆಂಬಲವಾಗಿತ್ತು. ಆಗಿನ ಮಾನವನಿಗೆ ಭೂಮಿ ಅಚಲವಾಗಿತ್ತು. ಸೂರ್ಯ, ಚಂದ್ರ ಇವೆಲ್ಲ ನಿಲ್ಲದೆ ತಿರುಗುತ್ತವೆ. ಮನುಷ್ಯನ

ಜೀವನದ ಮೇಲೆ ಪರಿಣಾಮವನ್ನು ಮಾಡುತ್ತವೆ. ಮನುಷ್ಯನ ಮನಸ್ಸಿನಲ್ಲಿ ತಂತಾನೆ ಚಲಿಸುವುದು ಜೀವದ ಚಿಹ್ನೆ ಎಂದು ನಂಬಿಗೆ ಇದೆ. ಹಾರಾಡುವ ನೊಣವನ್ನು ಕಪ್ಪೆ ಹಿಡಿಯುತ್ತದೆ. ಚಲಿಸದೆ ಬಿದ್ದಿರುವ ನೊಣವನ್ನು ಹಿಡಿಯುವುದಿಲ್ಲ. ರಟ್ಟಿನ ಗೊಂಬೆ ಕುಣಿವಾಗ ಜೀವವಿದ್ದಂತೆಯೇ ಕಾಣುತ್ತದೆ. ಅನಾಗರಿಕ ಮನುಷ್ಯನಿಗೂ ಈ ಹುಟ್ಟುಗುಣದ ತರ್ಕ ಸ್ವಾಭಾವಿಕ ಎಂದು ಜೀವಶಾಸ್ತ್ರಜ್ಞನಿಗೆ ಗೊತ್ತುಂಟು. ತಂತಾನೆ ಚಲಿಸುವದೆಂದು ಒಪ್ಪಿತವಾದದ್ದು ಜೀವ ಹೊಂದಿದೆಯೆಂದೇ ಅಭಿಪ್ರಾಯವಾಗುತ್ತದೆ. ಹಾಗೂ ಗ್ರಹಗಳ ಚಲನೆ ಹಾಗೆಯೇ ಎಂದು ಕಾಣುತ್ತಿತ್ತು. ಈ ಚಲನೆಯಿಂದಲೇ ಅವು ಜೀವಂತವಿವೆಯೆಂದು ಜನ ತಿಳಿದರು ಗ್ರಹ ಹಾಗೂ ನಕ್ಷತ್ರಗಳು ಭೂಮಿಯ ಸುತ್ತಲೂ ಸುತ್ತು ಹಾಕುತ್ತ ಭೂಮಿ ಹಾಗೂ ಮನುಷ್ಯರ ಮೇಲೆ ನಿಯಂತ್ರಣಪಡುವವೆಂದು ಅವರು ಸುಲಭವಾಗಿ ತಿಳಿಯುತ್ತಿದ್ದರು. ಆಕಾಶದ ಮನೆಗಳಲ್ಲಿ ಸೂರ್ಯಮಾಲೆಯ ಗ್ರಹಗಳು ಸುತ್ತುವವೆಂದೂ ಅವು ಇರುವ ಮನೆಗಳಲ್ಲಿ ತಮ್ಮ ಪ್ರಭಾವವನ್ನು ಸ್ಥಾಪಿಸಿ ಹೋಗುವವೆಂದೂ ನಂಬುತ್ತಿದ್ದರು. ಗ್ರಹವು ಬಂದ ಮನೆಗಳ ಪರಿಣಾಮವಾಗಿಯೂ ಕೆಲ ಬದಲಾವಣೆ ಹೊಂದುತ್ತದೆ. ಗುರು ಮನುಷ್ಯನಿಗೆ ಒಳ್ಳೆ ಗ್ರಹ. ಶುಕ್ರ ಸಂತತಿಯ ಮೇಲೆ ಪರಿಣಾಮ ಮಾಡುವವ. ಶನಿ ದುಷ್ಟ. ಬುಧ ಚಂಚಲ ಹೀಗೆ ಭಾವನೆಯಿತ್ತು.

## ಉಪಕಾರಕ್ಕಾಗಿ ಪೂಜೆ

ಕೆಲವು ಪ್ರಾಣಿಗಳಿಂದಲೂ ವನಸ್ಪತಿಗಳಿಂದಲೂ ತಮಗಾಗುವ ಉಪಕಾರಕ್ಕಾಗಿಯೂ ಅವುಗಳ ಮೇಲಿನ ಕೃತಜ್ಞತೆ

ಯಿಂದಲೂ ಮನುಷ್ಯ ಅವುಗಳಿಗೆ ಪೂಜೆ ಸಲ್ಲಿಸುತ್ತಾನೆ. ಹಿಂದು ಗಳಿಗೆ ಆಕಳಿನ ಉಪಯೋಗ ಬಹಳ, ಆಕಳಿನ ಪ್ರತಿಯೊಂದು ಅವಯವ ಪವಿತ್ರವೆಂದು ತಿಳಿಯುತ್ತಾರೆ ಹಿಂದುಸ್ಥಾನಕ್ಕೆ ಬರುವ ಮೊದಲಿನಿಂದ ಆರ್ಯರಿಗೆ ಆಕಳು-ಎತ್ತುಗಳ ಅಗತ್ಯ ಬಹಳವಾಗಿದ್ದಿರಬಹುದು. ತೆಂಗಿನ ಮರ, ತುಲಸೀಗಿಡ ಮುಂತಾ ದವು ತಮ್ಮ ಉಪಯುಕ್ತತೆಯಿಂದಲೇ ಹೆಚ್ಚು ಗೌರವಾರ್ಹ ವಾಗಿವೆ. ದೇವರು ಸರ್ವವ್ಯಾಪಿ ಎಂಬ ಘನವಾದ ವಿಚಾರವೂ ಇಂಥ ಪೂಜೆಗಳಿಗೆ ಅನುಕೂಲವಾಗಿರುವುದು ಕಾಣುತ್ತದೆ.

## ಕಾವ್ಯಕಲ್ಪನೆಗಳು

ಕಾವ್ಯಗಳಲ್ಲಿನ ಅತಿಶಯೋಕ್ತಿಗಳು ಹಾಗೂ ಇತರ ಕಲ್ಪನೆ ಗಳು ಕೆಲ ಸಲ ಮುಂದಿನವರ ಮೂಢನಂಬಿಕೆಗಳನ್ನು ಪೋಷಿಸು ಸುವುದು ಕಾಣುತ್ತದೆ. ಕೆಲವು ಬಳ್ಳಿಗಳು ಅಂಗನೆಯರ ಪಾದ ಸ್ಪರ್ಶವಿಲ್ಲದೆ ಹೂಬಿಡುವುದಿಲ್ಲ ಎಂಬ ಕಾಲಿದಾಸಾದಿಗಳ ಉಕ್ತಿ ಇಂಥ ಒಂದು ಉದಾಹರಣೆ. ಕೋಗಿಲೆಗಳು ವಸಂತ ಮಾಸದಲ್ಲಿ ಮಾತ್ರ ಕೂಗುತ್ತವೆ, ಚಕೋರಪಕ್ಷಿ ಚಂದ್ರಕಿರಣಗಳನ್ನು ಕುಡಿಯುತ್ತದೆ ಮುಂತಾದ ಕವಿಸಮಯಗಳನ್ನು ವಿವೇಚನಾ ಶಕ್ತಿ ಕಡಿಮೆಯಿದ್ದವರು ನಿಜವೆಂದೇ ತಿಳಿಯುತ್ತಾರೆ. ರಾವಣ ನಿಗೆ ಹತ್ತು ತಲೆಗಳಿರುವ ಹೇಳಿಕೆ, ಬ್ರಹ್ಮನ ನಾಲ್ಕು ಮುಖ ಗಳು ಗಣಪತಿಯ ಆನೆಮೊಗ ಇವಕ್ಕೆಲ್ಲ ವಿಶಿಷ್ಟ ಸಂಕೇತಾರ್ಥ ಇದ್ದಿರಬೇಕು. ಅನೇಕ ಪುರಾಣಕಥೆಗಳು ನಿಸರ್ಗವ್ಯಾಪಾರ ಗಳಿಗೆ ಮಾನವಜೀವನದ ರೂಪಕೊಟ್ಟ ಕಥೆಗಳೆಂದು ಅನೇಕರ ಹೇಳಿಕೆಯಿದೆ. ವಾಮನಾವತಾರದ ಕಥೆ ಸೂರ್ಯ ಮೂಡಿ, ಮೇಲೆ ಬಂದು ಮುಳುಗುತ್ತಿರುವ ಘಟನೆಯಿಂದ ರೂಪುಗೊಂಡಿ

ತೆಂದೂ ವಿವರಣೆ ಕೊಡುತ್ತಾರೆ. ಜನಾಂಗದ ನಂಬಿಕೆಗಳನ್ನೂ ಅನೇಕ ಸಲ ಕವಿ ಚಿತ್ರಿಸುತ್ತಾನೆ ಎಂಬ ವಿಷಯವನ್ನೂ ಮರೆಯತಕ್ಕದ್ದಲ್ಲ. ಭಾರತ, ರಾಮಾಯಣಗಳಲ್ಲಿ ಬರುವ ಮಂತ್ರಾಸ್ತ್ರಗಳ ಕಲ್ಪನೆ ಜನಾಂಗದಲ್ಲಿ ಮೊದಲೂ ಪ್ರಚಾರದಲ್ಲಿ ತ್ತೆಂದೂ ಆದ್ದರಿಂದಲೇ ಕವಿಗಳು ತಮ್ಮ ಕಾವ್ಯಗಳಲ್ಲಿ ಅದನ್ನು ತಂದರೆಂದೂ ಹೇಳಬಹುದು.

## ಮೂಢನಂಬಿಕೆಗಳ ಉಪಯುಕ್ತತೆ

ಪ್ರಾಣಿಗಳನ್ನು ಕುಲಲಾಂಛನವಾಗಿಟ್ಟುಕೊಳ್ಳುವುದು ಅನಾಗರಿಕ ಜನರ ಆರೋಗ್ಯಕ್ಕೆ ಅನುಕೂಲವಾಗಿದೆ. ಅದರಂತೆ ಮನಸ್ಸಿನ ಭ್ರಮೆಯಿಂದ ಉಂಟಾದ ದೆವ್ವಗಳನ್ನು ಬಿಡಿಸುವ ಅನೇಕ ವಿಧಾನಗಳ ಮನಸ್ಸನ್ನು ಹಗುರ ಮಾಡುವ ದೃಷ್ಟಿಯಿಂದಲೂ ಮನಸ್ಸಿನಿಂದ ದೇಹದ ಮೇಲೆಯೂ ಪರಿಣಾಮವಾಗುವ ದೃಷ್ಟಿಯಿಂದಲೂ ಕೆಲಮಟ್ಟಿಗೆ ಉಪಯುಕ್ತವಾಗಿವೆ. ಸಾಮೂಹಿಕವಾಗಿ ಜರುಗಿಸುವ ವಿವಿಧ ಪೂಜಾವಿಧಾನಗಳು, ಹಬ್ಬಗಳು ಮಾನವನ ಜೀವನದಲ್ಲಿ ವೈವಿಧ್ಯವನ್ನು ತಂದು ಬೇಸರನ್ನು ಹೋಗಲಾಡಿಸುತ್ತವೆ. ತಾಯಿತಗಳು, ಮಾಟದ ಶಕ್ತಿಯುಳ್ಳವೆಂದು ತಿಳಿಯಲಾದ ಪ್ರಾಣಿಗಳ ಅವಯವಗಳು, ಮಾಟಗಳು ನಿಸರ್ಗದ ಮೇಲೆ ಅನಾಗರಿಕನಿಗೆ ಅಧಿಕಾರದ ನಂಬಿಕೆಯ ಬಲವನ್ನು ಕೊಡುವ ರೀತಿಯಿಂದ ಆತನ ಮನಸ್ಸಿಗೆ ನೆಮ್ಮದಿಯನ್ನೂ ತಂದುಕೊಟ್ಟಿವೆ. “ ಮಾಟಗಾರಿಕೆ, ಗಂಗಾನದಿಯ ನೀರು, ಸೇಂಟ್ ಫ್ರಾನ್ಸಿಸ್ ಝೇವಿಯರರ ಕಡಿದ ಮೊಳಕೈ ತುಂಡು, ಹಂದಿಯ ಎಲುವು, ಅಥವಾ (ಗುಣಕಾರಕವೆಂದು ಅಥವಾ ಮಹಿಮೆಯುಳ್ಳದೆಂದು) ಬಹಳ ಪ್ರಚಾರ ಪಡೆದ

ಯಾವುದೇ ವಸ್ತುವಿನಿಂದಾದರೂ ಜನಸಂಖ್ಯೆಯಲ್ಲಿ ಕೆಲವು ಪ್ರಮಾಣದ ಜನರು ಗುಣಹೊಂದುತ್ತಾರೆಂಬುದು ಯಾವಾಗಲೂ ಕಂಡುಬರುತ್ತದೆ”ಂದು ಆಲ್ಡಸ್ ಹಕ್ಸ್ಲಿಯವರು ಹೇಳುತ್ತಾರೆ. ಗುಣಹೊಂದಲು ಕೆಲವರಿಗೆ ಡಾಕ್ಟರರ ಔಷಧ ಮಾತ್ರ ಸಾಲದು. ಅವರ ಕೈಗುಣವೂ ಚನ್ನಾಗಿರಬೇಕು.

## ಧಾರ್ಮಿಕ ವಿಧಿಗಳ ಉದ್ದೇಶ

ಜನರ ಹಿತದ ದೃಷ್ಟಿಯಿಂದ ಬುದ್ಧಿವಂತರಾದವರು ಅನೇಕ ಆಚರಣೆಗಳನ್ನು ಗೊತ್ತುಮಾಡುತ್ತಾರೆ. ಅದರಲ್ಲಿ ಸಂಧ್ಯಾ ವಂದನೆಯ ಕ್ರಮವೊಂದು. ನದಿಗೆ ಹೋಗಿ ಸ್ನಾನ ತೀರಿಸಿ ಸಂಧ್ಯಾ ಮುಹೂರ್ತದಲ್ಲಿ ಸೂರ್ಯನ ಹಿತವಾದ ಕಿರಣಗಳು ಮೈಮೇಲೆ ಬೀಳುತ್ತಿದ್ದಾಗ ಬಯಲಿನ ಶುದ್ಧ ಹವೆಯನ್ನು ಸೇವಿಸುತ್ತ ಸೂರ್ಯನು ನನಗೆ ಒಳ್ಳೆಯ ಬುದ್ಧಿಯನ್ನು ಕೊಡಲೆಂದು ಪ್ರಾರ್ಥಿಸುವದು ದೇಹ, ಮನಸ್ಸುಗಳೆರಡರ ಆರೋಗ್ಯಕ್ಕೂ ಪೋಷಕವಾಗಿದೆ. ಆದರೆ ಆ ಉದ್ದೇಶ ಈಗಿನ ಸಂಧ್ಯಾ ವಂದನೆಗಳಲ್ಲಿ ಸಫಲವಾಗುವದಿಲ್ಲ. ಹೆಂಗಸರಿಗೆ ತುಲಸೀ ಪೂಜೆ ಅಶ್ವತ್ಥಪ್ರದಕ್ಷಿಣೆಗಳು ಹಾಗೆಯೇ ಆರೋಗ್ಯದಾಯಕಗಳು. ಏಕಾದಶೀ ಉಪವಾಸಗಳ ಉದ್ದೇಶ ಉಪವಾಸದಿಂದ ಪಚನಕ್ರಿಯೆಯನ್ನು ಸರಿಯಾಗಿಡುವುದೇ ಆಗಿದೆ. ಆದರೆ ಇಂಥ ಉಪವಾಸಗಳು, ಅಥವಾ ಫಳಾರಗಳು ಮೂಲ ಉದ್ದೇಶ ಸಾಧಿಸುವದು ದೂರ ಉಳಿದು ತದ್ವಿರುದ್ಧ ಪರಿಣಾಮವನ್ನು ಸಾಧಿಸುತ್ತವೆ. ‘ಫಳಾರ’ದಲ್ಲಿ ಫಲಾಹಾರದ ಮೂಲ ಅರ್ಥವೇ ಕಣ್ಮರೆಯಾಗಿದೆ. ಹೀಗೆ ಮೂಲ ಉದ್ದೇಶ ಕಣ್ಮರೆಯಾಗಿ ಬರೇ ಅಂಧಶ್ರದ್ಧೆಯ ತೋರಿಕೆಯ ಆಚರಣೆಗಳಾಗಿವೆ ಇಂಥ

ವಿಧಿಗಳು. ಮಡಿಮೈಲಿಗೆಗಳ ಮೂಲ ಉದ್ದೇಶ ಆರೋಗ್ಯ ದೃಷ್ಟಿ ಎಂದು ಸ್ಪಷ್ಟವಾಗಿ ತಿಳಿಯುತ್ತದೆ. ಆದರೆ ಆ ಉದ್ದೇಶ ಹೋಗಿ ವರ್ಷಗಟ್ಟಲೆ ತೊಳೆಯದ ನಾರಿನ ಸೀರೆ ಅಥವಾ ರೇಶಿಮೆಯ ಬಣ್ಣದ ವಸ್ತ್ರ ಮಡಿ ಎಂಬ ಕಲ್ಪನೆ ರೂಢಿಯಲ್ಲಿ ಬಂದುಹೋಗಿದೆ. ಆದೇ ದಿನ ತೊಳೆದ ಹತ್ತಿಯ ವಸ್ತ್ರವು ಬೇರೆ ವಸ್ತ್ರದ ಸೋಂಕಾದರೂ ಮೈಲಿಗೆ ಎಂದು ಅನೇಕರ ತಿಳಿವಳಿಕೆ. ಇದು ಮೂಢನಂಬಿಕೆಯೇ ಸರಿ. ರಜಸ್ವಲೆಯರು, ಸತ್ತವರ ಹೆಣ, ಬಾಣಂತಿಯರು ಮೈಲಿಗೆ ಎನ್ನುವುದರಲ್ಲಿಯೂ ಆರೋಗ್ಯ ದೃಷ್ಟಿಯನ್ನು ಗುರುತಿಸಬಹುದು.

ಮಾರ್ಕೊಪೋಲೋ ಎಂಬ ಮಧ್ಯಯುಗದ ಪ್ರವಾಸಿಯು ಟಾರ್ಟರಿಯಲ್ಲಿನ ಒಂದು ಮೋಜಿನ ಪದ್ಧತಿಯನ್ನು ಉಲ್ಲೇಖಿಸಿದ್ದಾನೆ. ಹೆಂಡತಿ ಹಡೆದು ಹದಿನಾಲ್ಕು ದಿನಗಳ ನಂತರ ಗಂಡನು ಶಿಶುವಿನ ಹತ್ತಿರ ಮಲಗಿ ೪೫ ದಿನ ಬಾಣಂತಿತನಕ್ಕೆ ಕೂಡ್ರಬೇಕಿತ್ತಂತೆ. ಆತನ ಸ್ನೇಹಿತರು ಆಗಾಗ್ಗೆ ಬಂದು ಆತನ ಯೋಗಕ್ಷೇಮವನ್ನು ಕೇಳಿಕೊಂಡು ಹೋಗುತ್ತಿದ್ದರಂತೆ. ಈ ವಿಚಿತ್ರ ಪದ್ಧತಿಗೂ ಒಂದು ಸಮಂಜಸ ಕಾರಣವನ್ನು ನನ್ನ ಮಿತ್ರರೊಬ್ಬರು ಸೂಚಿಸಿದರು. ಹೆಂಡತಿಯ ಬಾಣಂತಿತನದ ಅವಧಿಯಲ್ಲಿ ಗಂಡನು ಇತರ ಹೆಂಗಸರ ಬೆನ್ನು ಹತ್ತಿ ಹೋಗುವುದನ್ನು ತಪ್ಪಿಸುವ ಸಲುವಾಗಿ ಈ ಕ್ರಮ ಬಳಕೆಯಲ್ಲಿ ಬಂದಿರಬಹುದೆಂದು ಹೇಳಿದರು. ಈ ಉದ್ದೇಶವಿಲ್ಲದಿದ್ದರೆ ಇದೊಂದು ಹಾಸ್ಯಾಸ್ಪದ ಮೂಢನಂಬಿಕೆ.

## ಮೂಢನಂಬಿಕೆಗಳಿಂದಾದ ದುಷ್ಪರಿಣಾಮಗಳು

ಮಾಟಗಾರಿಕೆಯ ನಿಯಂತ್ರಣದಿಂದ ಪಂಗಡಗಳಲ್ಲಿ ಬುದ್ಧಿ

ವಂತರೂ ಕರ್ತೃತ್ವಶಕ್ತಿಯುಳ್ಳವರೂ ಮುಖಂಡರಾಗಿ ಅವು ಗಳಿಗೆ ಒಳಿತೇ ಹೆಚ್ಚಾಗಿದೆಯೆಂದು ಸರ್ ಜೇಮ್ಸ್ ಫ್ರೇಸರರು ಹೇಳಿದ್ದರೂ ಅದು ಸಂಪೂರ್ಣ ಸತ್ಯವಲ್ಲ. ದೇವತೆಗಳ ಪ್ರೀತ್ಯರ್ಥ ವಾಗಿ ಬೆಳೆ ಹೆಚ್ಚಾಗುವ ಸಲುವಾಗಿ, ಮಳೆ ಬರುವುದಕ್ಕಾಗಿ, ಅಥವಾ ಇನ್ನಾವುದೋ ಪೀಡೆಯ ನಿವಾರಣೆಗಾಗಿ ನಿರಪರಾಧಿ ಜನರ ಬಲಿ ಕೊಟ್ಟುದಕ್ಕೆ ಲೆಕ್ಕವಿಲ್ಲ. ಯಾವ ಕಾಲದಲ್ಲಿಯೂ ಅಜ್ಞ ಜನರನ್ನು ಮೋಸಗೊಳಿಸಿ ಅವರ ಮೇಲೆ ಅಧಿಕಾರ ನಡೆ ಸಲೂ ಅವರನ್ನು ಶೋಷಿಸಲೂ ಭೂತವೈದ್ಯ ಅಥವಾ ಪೂಜಾರಿ ಗಳಿಗೆ ಮೂಢನಂಬಿಕೆ ಪ್ರಬಲ ಸಾಧನವಾಗಿ ನಡೆದುಬಂದಿದೆ. ಮೂಢನಂಬಿಕೆಗಳನ್ನು ಹೆಚ್ಚು ಮಾಡುವುದಲ್ಲದೆ ಕಡಿಮೆಮಾಡು ವುದರಲ್ಲಿ ಅವರ ಆಸಕ್ತಿಯಿಲ್ಲ, ಪ್ರಯತ್ನವಿಲ್ಲ. ಅತಿ ಪ್ರಾಚೀನ ಕಾಲದಲ್ಲಿಯೇ ಬೆಬಿಲೋನಿಯನ್ ಪೂಜಾರಿಗಳು ಸೂರ್ಯ ಗ್ರಹಣವನ್ನು ಮುಂಚೆಯೇ ತಿಳಿಸಬಲ್ಲವರಾಗಿದ್ದರು. ಆದರೆ ಅವರು ಆ ಜ್ಞಾನವನ್ನು ಜನರ ಮೇಲೆ ತಮ್ಮ ಸತ್ತೆಯನ್ನು ಚನ್ನಾಗಿ ಸ್ಥಾಪಿಸಲು ಬಳಸಿದರು. ಭೂತಗಳನ್ನು ದೂರ ಮಾಡುವುದಕ್ಕಾಗಿ ಬೇರೆ ಪಂಗಡಗಳವರ ತಲೆಗಳನ್ನು ತರಲು ಮನುಷ್ಯರ ಬೇಟೆಯಾಡುವದು ಕಾಡುಜನಗಳ ವ್ರತವೇ ಆಗಿತ್ತು. ಈಗಲೂ ಈ ಪದ್ಧತಿ ಅನೇಕ ಪ್ರದೇಶಗಳಲ್ಲಿದೆ. ಆಫ್ರಿಕದ ಬಸುಟೊಲೆಂಡಿನಲ್ಲಿ ಬಸುಟೋ ಜನರು ಮಾಟದ ಶಕ್ತಿಯನ್ನು ಪಡೆಯಲು ಜೀವಂತ ಮನುಷ್ಯರನ್ನು ಹಿಡಿದು ಅವರ ದೇಹದ ತುಂಡುಗಳನ್ನು ಬೇರೆ ಬೇರೆ ಅವಯುವಗಳಿಂದ ಕಡಿದು, ವನಸ್ಪತಿ ಗಳೊಡನೆ, ರಕ್ತದೊಡನೆ ಬೆರಸಿ ಕೋಡುಗಳೊಳಗೆ ತುಂಬಿ ಕೊಂಡು ಇಟ್ಟುಕೊಳ್ಳುತ್ತಾರೆ. ಆ ಮಿಶ್ರಣವನ್ನು ಮೈಗೆ ಬಳಿದುಕೊಂಡರೆ, ಇಲ್ಲವೆ ತಿಂದರೆ ಅದ್ಭುತ ಶಕ್ತಿ ಬರುವದೆಂದು

ಅವರ ನಂಬಿಗೆ. ಅದಕ್ಕಾಗಿ ಪ್ರತಿವರ್ಷ ಸಾವಿರಾರು ಜನರ ಕೊಲೆ ಮಾಡುತ್ತಾರೆ. ಈ ಚಿತ್ರಹಿಂಸೆ ಮದ್ದಿನ ಕೊಲೆ ಎಂದು ಪ್ರಸಿದ್ಧವಾಗಿದೆ. ಯುರೋಪಿನಲ್ಲಿ ಮಾಟಗಾರರನ್ನು ಜೀವಂತ ಸುಡುವ ಶಿಕ್ಷೆ ಹದಿನೇಳನೇ ಶತಮಾನದ ಕೊನೆಯ ವರೆಗೂ ಆಚರಣೆಯಲ್ಲಿತ್ತು. ಮಾಟಗಾರಿಕೆಯಲ್ಲದ ನಿರಪರಾಧಿ ಜನ ರನ್ನು ಮಾಟಗಾರರೆಂದು ಒಂದಿಲ್ಲೊಂದು ಕಾರಣದಿಂದ ನಿರ್ಣಯಿಸಿ ಸುಡುತ್ತಿದ್ದರು. ಮಾಟಗಾರಿಕೆಯಲ್ಲಿನ ಮೂಢ ನಂಬಿಕೆಯೋ, ಮಾಟಗಾರರ ಹೆದರಿಕೆಯೋ ಇದಕ್ಕೆ ಮೂಲ. ಧೂಮಕೇತು, ದೆವ್ವ ಭೂತಗಳು, ನಿಷೇಧ ನಿಯಮ ಪಾಲಿಸ ದಿದ್ದರೆ ಆಗುವ ಪರಿಣಾಮ ಮೊದಲಾದವುಗಳ ಹೆದರಿಕೆ ಗಳಿಂದ ಅನಾವಶ್ಯಕವಾಗಿ ಮನಸ್ಸು ಹೆದರಿಕೆಯ ದುಷ್ಪರಿಣಾಮ ಅನುಭವಿಸಿ ಜೀವನದಲ್ಲಿನ ಸಂತೋಷಕ್ಕೆ ಅಷ್ಟುಮಟ್ಟಿಗೆ ಎರ ವಾಗುತ್ತದೆ. ಮೈಲಿಬೇನೆ ದೇವಿಬರುವದೆಂದು ಹಳ್ಳಿಗಳಲ್ಲಿ ಮೈಲಿ ಚುಚ್ಚಿಸಿಕೊಳ್ಳಲು ಒಪ್ಪದೆ ಬೇನೆಯಿಂದಿ ಬಳಲಿದವರು ಬಹಳ ಮಂದಿ.

## ವಿಜ್ಞಾನದ ಹೋರಾಟ

ಮೂಢನಂಬಿಕೆಗಳು ಅಸತ್ಯವೆಂದು ಗೊತ್ತುಹಚ್ಚಿದ ವಿಚಾರ ವಾದಿಗಳಿಂದ ಹೊಸವಿಷಯ ಕಂಡುಹಿಡಿಯಬೇಕೆಂಬ ಕುತೂ ಹಲದಿಂದ ವಿಜ್ಞಾನದ ಆರಂಭವಾಗಿರಬೇಕು. ಹದಿನೇಳನೆಯ ಶತಮಾನದ ವಿಜ್ಞಾನದಲ್ಲಿಯೂ (ವಿಶೇಷವಾಗಿ ವೈದ್ಯಶಾಸ್ತ್ರ ದಲ್ಲಿ) ಕೆಲವು ಮೂಢನಂಬಿಕೆಗಳನ್ನು ಕಾಣಬಹುದಾದರೂ ವಿಜ್ಞಾನ ಮೂಢನಂಬಿಕೆಗಳೊಡನೆ ಹೋರಾಡುತ್ತಲೇ ಮುಂದು ವರಿಯುತ್ತ ಬಂದಿದೆ. ಅಂಧಶ್ರದ್ಧೆಯ ಮತಮೂಢರೂ ಜನ

ತಮ್ಮ ನಿಯಂತ್ರಣದಿಂದ ತಪ್ಪಿಬಾರದೆನ್ನುವ ಮತಪೀಠಗಳವರೂ ವಿಜ್ಞಾನವನ್ನು ವಿರೋಧಿಸುತ್ತಲೇ ಬಂದಿದ್ದಾರೆ. ಸತ್ಯಶೋಧಕರ ಬಲಿದಾನದಿಂದಲೇ ವಿಜ್ಞಾನದ ಸಾಕ್ಷಾತ್ಕಾರವಾಗುತ್ತ ಬಂದಿದೆ. ಪ್ರತಿಯೊಂದು ವಿಷಯವನ್ನೂ ಪರೀಕ್ಷಿಸಿ ನೋಡಬೇಕೆನ್ನುವ ಸಾಕ್ರೆಟೀಸನಿಗೆ ನಾಸ್ತಿಕನೆಂಬ ಹಾಗೂ ಯುವಕರನ್ನು ಕೆಡಿಸಿದನೆಂಬ ಆಪಾದನೆಯಿಂದ ಮರಣದಂಡನೆಯಾಯಿತು. ಬೈಬಲ್ಲಿನ ಹೇಳಿಕೆಗೆ ವಿರುದ್ಧ ಸಿದ್ಧಾಂತ ಹೇಳಿದ ಕಾರಣಕ್ಕಾಗಿ ರಾಬರ್ಟ್ ಬ್ರೂನೋನನ್ನು ಜೀವಂತ ಸುಟ್ಟರು. ಗೆಲಿಲಿಯೋನಿಗೆ ಶಿಕ್ಷೆಯಾಯಿತು. ಆದರೆ ಗೆಲಿಲಿಯೊ, ನ್ಯೂಟನ್ನರ ಶೋಧಗಳಿಂದ ಜನರ ವಿಚಾರದೃಷ್ಟಿಗೆ ಹೆಚ್ಚಿನ ಉತ್ತೇಜನ ದೊರೆಯಿತು. ನ್ಯೂಟನ್ನನ ಗಣಿತಶಾಸ್ತ್ರ ಸಿದ್ಧಾಂತಗಳು, ಗುರುತ್ವಾಕರ್ಷಣ ನಿಯಮಗಳು ವಿಜ್ಞಾನದೃಷ್ಟಿಗೆ ತುಂಬಾ ಬಲವನ್ನು ತಂದುಕೊಟ್ಟು ಹೊಸ ವಿಚಾರದೃಷ್ಟಿಗೆ ಬಹಳ ಉತ್ತೇಜನ ಕೊಟ್ಟವು. ಧೂಮಕೇತುಗಳು ಗುರುತ್ವಾಕರ್ಷಣ ನಿಯಮವನ್ನು ಪಾಲಿಸುತ್ತವೆಂಬುದೂ ಕೆಲವು ಧೂಮಕೇತುಗಳಿಗಾದರೂ ಲೆಕ್ಕಾಚಾರ ಮಾಡಿ ಹೇಳಬಹುದಾದ ಚಲನರೇಖೆಗಳಿರುವವೆಂಬುದೂ ತಿಳಿದಮೇಲೆ ಸಾಮಾನ್ಯವಾಗಿ ವಿದ್ಯಾವಂತರು ಅವು ಭವಿಷ್ಯದ ಅನಿಷ್ಟಸೂಚಕ ಎಂದು ತಿಳಿಯುವುದನ್ನು ಬಿಟ್ಟರು. ಅಟ್ಲಾನ್ ರಾಕ್ಷಸನಾಗಲಿ ಮಹಾಶೇಷನಾಗಲಿ ಭೂಮಿಯನ್ನು ಹೊತ್ತಿಲ್ಲವೆಂದೂ ಭೂಮಿ ದುಂಡಗಿದೆಯೆಂದೂ ವಿಜ್ಞಾನ ಸಿದ್ಧಮಾಡಿತೋರಿಸಿದೆ. ವಿಜ್ಞಾನದ ಮೂಲಕ ಗ್ರಹಣ, ಧೂಮಕೇತುಗಳ ಕಾರಣ ಶಾಲಾಬಾಲಕರಿಗೂ ಗೊತ್ತಾಗಿದ್ದರೂ ಪರಂಪರೆಯ ವರ್ಚಸ್ಸಿನ ಮೂಲಕ ನಮ್ಮ ಜನರ ಮೂಢನಂಬಿಕೆ ಇನ್ನೂ ಪೂರ್ಣ ಹೋಗಿಲ್ಲ.

ಆದರೆ ಬರುವ ಹೊಸ ಪೀಳಿಗೆಯವರು ಅನೇಕ ಮೂಢನಂಬಿಕೆಗಳನ್ನು ಕಳೆದುಕೊಂಡಿರುತ್ತಾರೆ. ಅಶಿಕ್ಷಿತರು ಶಿಕ್ಷಣಹೊಂದುತ್ತ ಬಂದಂತೆ ವಿಜ್ಞಾನದ ಪ್ರಸಾರ ಹೆಚ್ಚಾಗಿ ಬಹಳಷ್ಟು ಮೂಢನಂಬಿಕೆಗಳು ಕಡಿಮೆಯಾಗುವ ಆಶೆಯುಂಟು. “ದೀರ್ಘ ಪ್ರಯಾಣ” (Long March) ಎಂಬ ಒಂದು ಚೀನೀ ನಾಟಕದಲ್ಲಿ ಕಮ್ಯುನಿಸ್ಟ ಚೀನೀ ಸೈನಿಕರು ಸ್ವೆಪ್ಪೆ ಭೂಮಿಯಲ್ಲಿ ತಂಗಿದ್ದಾಗ ಶಾನಾ ಉರ್ಸ ಎಂಬ ದಾದಿ ದೆವ್ವಗಳು ಮನುಷ್ಯರನ್ನು ಕೊಲ್ಲುತ್ತವೆ ಎಂದಾಗ ದೆವ್ವಗಳು ಮನುಷ್ಯರನ್ನು ಕೊಲ್ಲುವದಿಲ್ಲ, ಎತ್ತರವಾದ ತಪ್ಪಲಿನ ವಿರಲವಾದ ಹವೆಯ ಮೂಲಕ ಉಸಿರುಕಟ್ಟಿ ಸಾಯುವರೆಂದು ಚೌ ಎಂಬ ಚೀನೀ ಸೈನಿಕ ಉದ್ಗರಿಸುತ್ತಾನೆ. ನೈಸರ್ಗಿಕ ಘಟನೆಗಳ ಸಮಂಜಸ ಕಾರಣಗಳನ್ನು ತಿಳಿದುಕೊಳ್ಳಲೆಳಸುವ ಕುತೂಹಲ ಬುದ್ಧಿ, ವಿವೇಚನಾ ಮನೋವೃತ್ತಿ ಬೆಳೆಯಲು ಹೆಚ್ಚು ತಿಳಿದವರು ಅಜ್ಞಾನಿಗಳಿಗೆ ಹೀಗೆ ತಿಳಿವಳಿಕೆ ಕೊಡುವವು ಮೂಢನಂಬಿಕೆಯನ್ನು ಕಳೆಯಲು ಸಹಾಯವಾಗುತ್ತದೆ. ಆದರೆ ಸದ್ಯದ ವಿಜ್ಞಾನವೂ ವಿವರಣೆ ಕೊಡಲಾಗದ ಅನೇಕ ವಿಷಯಗಳೂ ಇವೆಯೆಂಬುದನ್ನೂ ನಾವು ಮರೆಯಬಾರದು. ವಶ್ಯನಿದ್ರೆ (ಹಿಪ್ನಾಟಿಸಂ) ಯಲ್ಲಿ ಒಬ್ಬನ ಮನಸ್ಸನ್ನು ಇನ್ನೊಬ್ಬನು ನಿಯಂತ್ರಣದಲ್ಲಿಟ್ಟುಕೊಂಡು ಸೂಚನೆ (ಸಜೆಶನ್) ಯಿಂದ ತಾನು ಹೇಳಿದ್ದನ್ನು ನಂಬುವಂತೆ, ಮಾಡುವಂತೆ ಪ್ರೇರೇಪಿಸಬಲ್ಲನು. ಆತನ ರೋಗಗಳನ್ನು ಕಡಿಮೆ ಮಾಡಬಲ್ಲನು. ಭವಿಷ್ಯಸೂಚಕ ಸ್ವಪ್ನಗಳ ಸಂಬಂಧದಲ್ಲಿಯೂ ವಿಜ್ಞಾನ ಸಮರ್ಪಕ ಉತ್ತರ ಹೇಳಲಾರದು. ದೂರದಲ್ಲಿ ನಡೆಯುವ ಘಟನೆಗಳು ಕೆಲವಕ ಮನಸ್ಸುಗಳಿಗೆ ಆಗಲೇ ತಿಳಿದುಹೋಗುವವು. ಕೆಲವರ

ಮನಸ್ಸುಗಳು ಕಾಲದೇಶಗಳ ಮೇರೆಯನ್ನು ಮೀರಿ ಇತರರ ಮನಸ್ಸುಗಳೊಡನೆ ಸೇರಬಲ್ಲವೆಂದು ಆಲ್ಡಸ್ ಹಕ್ಸಲಿಯವರು ಅಭಿಪ್ರಾಯಪಡುತ್ತಾರೆ. ರೇಡಿಯೊ, ಟೆಲಿವಿಜನ್‌ಗಳ ಕಾಲದಲ್ಲಿ ಇವು ಅಸಂಭವವೆಂದು ವಿಜ್ಞಾನವು ಹೇಳುವುದು ಹೇಗೆ? ವಶ್ಯ ನಿದ್ರೆ ವೈಜ್ಞಾನಿಕವೆಂದು ವಿಜ್ಞಾನಿಗಳು ಒಪ್ಪಿ ಅದನ್ನು ಚಿಕಿತ್ಸೆಯಲ್ಲಿ ಬಳಸುತ್ತಾರೆ. ಆದರೆ ವಶ್ಯನಿದ್ರೆಯ ಸತ್ಯತೆಯನ್ನು ವಿಜ್ಞಾನಿಗಳು ಮೊದಲು ಒಪ್ಪಿರಲಿಲ್ಲ. ಫ್ರಾನ್ಸಿನ ಪಿರನೀಸ್ ಪರ್ವತಾವಳಿಗಳಲ್ಲಿನ ಒಂದು ಮಿಶನರಿ ಆಸ್ಪತ್ರೆಯಲ್ಲಿ ಅನೇಕ ದೊಡ್ಡದೊಡ್ಡ ರೋಗಗಳನ್ನು ಪ್ರಾರ್ಥನೆಯಿಂದ ಗುಣಮಾಡುತ್ತಾರಂತೆ. ಪ್ರಖ್ಯಾತ ವಿಜ್ಞಾನಿ ಆಲೆಕ್ಸಿಸ್ ಕೆರೆಲ್‌ರು ವಿಜ್ಞಾನಿಗಳು ಇಂಥ ವಿಷಯಗಳನ್ನು ತಿರಸ್ಕರಿಸಬಾರದೆಂದೂ ಈ ದಿಶೆಯಲ್ಲಿ ಮನಸ್ಸು ಹಾಕಬೇಕೆಂದೂ ವಿಜ್ಞಾನಿಗಳಿಗೆ ಸಲಹೆಯಿತ್ತಿದ್ದಾರೆ. ಮನುಷ್ಯರ ಕಿವಿಗೆ ಕೇಳಿಸದ (ಅಲ್ಟ್ರಸೊನಿಕ್) ಸ್ವರದ ಶಕ್ತಿಯಿಂದ ಅನೇಕ ಕೆಲಸಗಳನ್ನು ನಡೆಸಲು ವಿಜ್ಞಾನಿಗಳು ಯಂತ್ರಗಳನ್ನು ನಿರ್ಮಿಸಿದ್ದಾರೆ ಶಬ್ದಗಳ ಶಕ್ತಿಯ ನಂಬಿಕೆಯಿಂದ ಭಾರತೀಯ ಮಂತ್ರಶಾಸ್ತ್ರ ನಿರ್ಮಿತವಾಗಿದೆ. ಅದರಲ್ಲಿ ತಥ್ಯವೆಷ್ಟಿದೆಯೆಂದು ಪರಿಶೋಧಿಸಬೇಕು ಪಾರಜದಿಂದ, ಕಬ್ಬಿಣದಿಂದ ಬಂಗಾರ ಮಾಡುವ ಪ್ರಯತ್ನದಲ್ಲಿ ಅರಬರು ಜಯಶೀಲರಾಗಲಿಲ್ಲ. ಆದರೆ ಇಂದಿನ ವಿಜ್ಞಾನಿಗಳು ವಿದ್ಯುತ್‌ಶಕ್ತಿಯಿಂದ ಪಾರಜವನ್ನು ಬಂಗಾರವಾಗಿ ಪರಿವರ್ತಿಸಿ ತೋರಿಸಿದ್ದಾರೆ. ಆದರೆ ಬಂಗಾರದ ಬೆಲೆಗಿಂತ ಒಂದು ಸಾವಿರ ಪಟ್ಟು ಹೆಚ್ಚು ವೆಚ್ಚ ಬರುತ್ತದೆಯಂತೆ ಈ ರೀತಿಯ ತಯಾರಿಕೆಯಲ್ಲಿ. ಆದರೆ ಸಿದ್ಧವಾದ ಬಂಗಾರ ಅಮೇರಿಕನ್ ಚಿನ್ನವಲ್ಲ, ಅಪ್ಪಟ ಬಂಗಾರವಾಗಿರುತ್ತದೆ. ಒಂದೆ ಅಸಾಧ್ಯವೆನಿಸಿದ

ಎಷ್ಟೋ ಸಂಗತಿಗಳನ್ನು ವಿಜ್ಞಾನ ಸಾಧ್ಯವಾಗಿ ಮಾಡಿದೆ. ಆದ್ದರಿಂದ ಈಗ ವಿವರಣೆ ಕೊಡಲಾಗದ ಅನೇಕ ವಿಷಯಗಳಿಗೆ ವಿಜ್ಞಾನ ಮುಂದೆ ವಿವರಣೆ ಕೊಡಲು ಶಕ್ಯವಾಗಬಹುದು.

## ಧರ್ಮ ಹಾಗೂ ಮೂಢನಂಬಿಕೆ

ಪ್ರಾರಂಭದಲ್ಲಿ ಬಹು ಮಹತ್ವವಾದ ಮಾನಸಿಕ ಪ್ರತಿಕ್ರಿಯೆಯ ರೂಪದಿಂದ ಮೂಢನಂಬಿಕೆ ಮೊದಲು ಕಾಣಿಸಿಕೊಳ್ಳುತ್ತದೆ. ಹುಲ್ಲುಗಾವಲಿನಲ್ಲಿಯ ಬೆಂಕಿಯಂತೆ ಬೇಗನೆ ಮೇಲ್ಭಾಗದಲ್ಲಿ ಹಬ್ಬಿಕೊಳ್ಳುತ್ತದೆ; ಆದರೆ ಹಬ್ಬಿದಂತೆ ವಿಕಾರಹೊಂದುತ್ತದೆ. ಮನುಷ್ಯನ ವಿಕಾಸ ಕಡಿಮೆ ಪ್ರಮಾಣದಲ್ಲಿದ್ದರೆ ಅದು ರಾಕ್ಷಸಾಕಾರವನ್ನು ತಳೆಯುತ್ತದೆ. ಪ್ರಾಗೈತಿಹಾಸಿಕ ಯುಗದ ಬಹುಸಂಖ್ಯಾಕರಲ್ಲಿ ಮನಸ್ಸಿನ ರೂಪರೇಷೆ ಅಪರಿಪಕ್ವವಾದುದಾಗಿರಬೇಕು. ಆದರೂ ಗುಂಪಿನಿಂದ ಬೇರೆಯಾದ ವ್ಯಕ್ತಿತ್ವ ಬೆಳೆಸಿಕೊಂಡ (mutant) ಕೆಲ ವ್ಯಕ್ತಿಗಳು ಇವರಿಂದ ವಿರುದ್ಧವಾದ ದಿಶೆಯಲ್ಲಿ ವಿಕಾಸ ಹೊಂದಿ ಶುದ್ಧ ಧಾರ್ಮಿಕ ವಿಚಾರಗಳನ್ನು ಬೆಳೆಸಿಕೊಂಡರು. ಮುಂದುವರಿದ ಗುಂಪು ಬಹುಸಂಖ್ಯಾಕರ ಮೂಢನಂಬಿಕೆಗಳಿಂದ ಗಂಡಾಂತರಕ್ಕೀಡಾಯಿತು.

ಶತಶತಮಾನಗಳಿಂದ ಧರ್ಮಗಳು ಮೂಢನಂಬಿಕೆಗಳೊಡನೆ ಹೋರಾಡುತ್ತಲೇ ಇರಬೇಕಾಗಿತ್ತು. "ಮೂಢನಂಬಿಕೆಯನ್ನು ಮಾನವ ಮನಸ್ಸಿನಿಂದ ಬೇರೆ ಮಾಡಲು ಅಸಾಧ್ಯವಾಗಿ ಕಂಡುದರಿಂದ ಆ ಹೋರಾಟ ಇನ್ನಷ್ಟು ಗಂಡಾಂತರದ್ದಾಯಿತು. ಈ ಕಾಲದಲ್ಲಿ ಸಹ ಎಲ್ಲತರದ ಮೂಢನಂಬಿಕೆಗಳು ಸತ್ಯ ಅಥವಾ ತರ್ಕಬದ್ಧ ತತ್ವಗಳಿಗಿಂತ ಬೇಗನೆ ಸುಲಭವಾಗಿ ಹಬ್ಬಿ

ತ್ತವೆ. ಕಾರಣವೇನೆಂದರೆ ವಿಕಾಸಹೊಂದದ ಮನಸ್ಸು ಗಳು ಬಹುಸಂಖ್ಯಾಕವಾಗಿರುವವು. ತರ್ಕಬದ್ಧವಾದ ವಿಚಾರ ವಿಸ್ತಾರವಾಗಿ ಬೆಳೆದಿದೆಯೆಂಬ ತೋರಿಕೆಯ ಸತ್ಯ (illusion) ಕಂಡು ಬರುವುದರ ಕಾರಣ ಅದು ಅನೇಕ ಸಲ ಮೂಢನಂಬಿಕೆಯಾಗಿ ಪರಿವರ್ತನ ಹೊಂದಿರು ವುದೇ ಆಗಿದೆ. ಜನಸಾಮಾನ್ಯರಲ್ಲಿರುವ ವಿಜ್ಞಾನದ ಪ್ರತಿಷ್ಠೆ ಸಹ ಮೂಢನಂಬಿಕೆಯ ಪ್ರಕಾರವೇ ಆಗಿದೆ ಎಂಬಲ್ಲಿ ಸಂಶಯ ವಿಲ್ಲ. ಧರ್ಮಗಳು ಬುದ್ಧಿವಾದಿಗಳು ಹಾಗೂ ಜನಸಾಮಾನ್ಯರು ಇವರೆಲ್ಲರ ಮೇಲೂ ಅಧಿಕಾರ ನಡೆಸಲು ಯತ್ನಿಸಿದವು. ಆದರೆ ಅವುಗಳ ಮುಖ್ಯ ಪ್ರಯತ್ನ ಹೆಚ್ಚೆಚ್ಚು ಸಂಖ್ಯೆಯ ಅನುಯಾಯಿ ಗಳನ್ನು ಪಡೆಯುವುದೇ ಆಗಿತ್ತು. ಹೀಗಾಗಿ ಅವು ಮೂಢ ನಂಬಿಕೆ ಬಲವಾಗಿ ಬೇರೂರಿ ನಿಂತಿರುವ ಜನರೊಡನೆ ಸಂಬಂಧ ಬೆಳೆಸಬೇಕಾಯಿತು. ಚರ್ಚುಗಳು ಆ ವೈರಿ (ಮೂಢನಂಬಿಕೆ) ಗಳನ್ನು ಪ್ರತ್ಯಕ್ಷ ಅನುಮೋದಿಸದಿದ್ದರೂ ಅನೇಕ ಬಗೆಯ ಸೌಮ್ಯ ಸ್ವರೂಪದ ಮೂಢನಂಬಿಕೆಗಳನ್ನು ಸಹಿಸುವ ಅಗತ್ಯ ಉಂಟಾಯಿತು. ಹಾಗೂ ಅವುಗಳನ್ನು ಸ್ವೀಕರಿಸಿ ಅವುಗಳಿಗೆ ಹೊಸ ರೂಪು ಕೊಟ್ಟು ಸಮಾಜದ ಪುರಾತನ ಸಂಪ್ರದಾಯ ಗಳನ್ನು ಕಡಿಮೆ ಗಂಡಾಂತರದ ಹಾದಿಯಲ್ಲಿ ತೆಗೆದುಕೊಂಡು ಹೋಗಬೇಕಾಯಿತು. ಕಲ್ಪನೆಗೆ ವಿಶೇಷ ಆಸ್ಪದವಿರುವ ಭೂ ಮಧ್ಯ ಸಮುದ್ರದ ತೀರಗಳಲ್ಲಿ ಜನ್ಮ ತಳೆದ ಕೆಥೊಲಿಕ್ ಧರ್ಮವು ಅನೇಕ ಪುರಾತನ ಆಚಾರಗಳನ್ನು ವಿಧಿಯಿಲ್ಲದೆ ಒಪ್ಪಬೇಕಾಗಿ ಬಂತು" ಎಂದು 'ಲಿಕಾಂಟೆ ಡು ನಾಯ್' ಎಂಬ ಸುಪ್ರಸಿದ್ಧ ಫ್ರೆಂಚ್ ಜೀವವಿಜ್ಞಾನಿಗಳು ಮಾನವನ ಭವಿತವ್ಯದ ('Human Destiny') ಎಂಬ ತಮ್ಮ ಗ್ರಂಥ

ದಲ್ಲಿ ಅಭಿಪ್ರಾಯ ಪಡುತ್ತಾರೆ.

## ವಿಜ್ಞಾನ ಹಾಗೂ ಧರ್ಮ

ವಿಜ್ಞಾನದ ಕ್ಷೇತ್ರ ಬೇರೆ. ಧರ್ಮದ ಕ್ಷೇತ್ರ ಬೇರೆ. ವಿಜ್ಞಾನದಿಂದ ನಾಗರಿಕತೆ ಬೆಳೆಯುತ್ತದೆ. ವಿಜ್ಞಾನ ವಸ್ತುನಿಷ್ಠವಾಗಿದ್ದರೆ, ಧರ್ಮ ವ್ಯಕ್ತಿನಿಷ್ಠವಾಗಿದೆ. ವಿಜ್ಞಾನ ಸಿದ್ಧಮಾಡಿದ ನೈಸರ್ಗಿಕ ನಿಯಮಗಳನ್ನು ಧರ್ಮ ಒಪ್ಪಿಕೊಳ್ಳುವುದರಲ್ಲಿ ವಿವೇಚನೆಯುಳ್ಳವರಿಗೆ ಯಾವ ತೊಂದರೆಯೂ ಅನಿಸಲಾರದು. ವಿಜ್ಞಾನ, ಧರ್ಮ ಪರಸ್ಪರ ಪೂರಕಗಳಾಗಿವೆ. ಧರ್ಮದಲ್ಲಿ ಸೇರಿರುವ ಮೂಢನಂಬಿಕೆಗಳನ್ನು ವಿಜ್ಞಾನದ ತಿಳಿವಳಿಕೆ ದೂರ ಮಾಡಿದರೂ ಉದಾತ್ತ ನೀತಿಯ ತಳಹದಿಯ ಮೇಲೆ ಸ್ಥಾಪಿತವಾದ ಯಾವ ಧರ್ಮಕ್ಕೂ ನಷ್ಟವಿಲ್ಲ. ರಾಮಾಯಣ, ಮಹಾಭಾರತ ಮುಂತಾದ ಕಾವ್ಯಗಳಲ್ಲಿನ ಅಸಂಭವ ಘಟನೆಗಳನ್ನು ನಂಬದಿದ್ದರೂ ಅವುಗಳಿಂದ ಕಾವ್ಯಾನಂದವನ್ನು ಹೊಂದುತ್ತೇವೆ. ಹೃದಯಕ್ಕೆ ಒಳ್ಳೆಯ ಸಂಸ್ಕಾರವಾಗುತ್ತದೆ. ಹಾಗೆ ಅನೇಕ ಮೂಢನಂಬಿಕೆಗಳನ್ನು ನಂಬದಿದ್ದರೂ ಧರ್ಮಗಳನ್ನು ವಿವೇಚನೆಯ ದೃಷ್ಟಿಯಿಂದ ಅಭ್ಯಾಸ ಮಾಡಿದರೆ ಅದರಿಂದ ಒಳ್ಳೆ ಪ್ರಯೋಜನವಾಗುತ್ತದೆ. ವಿವೇಚನೆಯ ಬುದ್ಧಿಯುಳ್ಳ ಭಾವಿಕತೆ ಇರಲು ಸಾಧ್ಯ ಎಂಬುದನ್ನು ಶ್ರೀ ರಾಮಕೃಷ್ಣ ಪರಮಹಂಸ, ವಿವೇಕಾನಂದರಂಥ ಮಹಾಪುರುಷರು ತಮ್ಮ ಜೀವನದಿಂದ ತೋರಿಸಿದ್ದಾರೆ. ಧರ್ಮದ ನಂಬುಗೆಯು ಸಾಮಾಜಿಕ ಅನ್ಯಾಯಗಳನ್ನು ನಿವಾರಿಸಲು ವಿರೋಧಕವಾಗದೆಂದು ಮಹಾತ್ಮಾಜಿಯವರ ಜೀವನದಿಂದ ತಿಳಿಯಬಹುದು. ಹೀಗೆ ಮಾನಸಿಕ ಆರೋಗ್ಯವನ್ನು ಕೊಡುವ ಶ್ರದ್ಧೆ ಬಾಳಿಗೆ ಬಲ

ವನ್ನು ನೀಡಬಲ್ಲುದು. ಇತರರ ನಂಬಿಗೆಗಳನ್ನು, ಶ್ರದ್ಧೆಗಳನ್ನು ಸಹಾನುಭೂತಿಯಿಂದ, ಉದಾರತನದಿಂದ ನೋಡುವ ದೃಷ್ಟಿ ಅಂಧಶ್ರದ್ಧೆಯನ್ನು ನಿವಾರಿಸಬಲ್ಲುದು.

ಜಗತ್ತಿನ ವಿವಿಧ ದೇಶಗಳ, ಜನಾಂಗಗಳ, ನಂಬಿಗೆಗಳನ್ನೂ ಆಚರಣೆಗಳನ್ನೂ ಸಹಾನುಭೂತಿಯಿಂದ ವಿಚಾರಿಸಿದಲ್ಲಿ, ಬಿಳಿಯನಿರಲಿ, ಹಳದಿಬಣ್ಣದವನಿರಲಿ, ಕಂದುಬಣ್ಣದವನಿರಲಿ, ಯುರೋಪಿಯನ್, ಮೊಂಗೋಲಿಯನ್, ಹಿಂದೀ, ಆಫ್ರಿಕನ್, ತಾಮ್ರವರ್ಣದ ಇಂಡಿಯನನಿರಲಿ, ಮೇಲುನೋಟದಲ್ಲಿ ಸಣ್ಣ ಸಣ್ಣ ವ್ಯತ್ಯಾಸಗಳಿದ್ದರೂ ಮಾನವನ ಮನಸ್ಸು ಎಷ್ಟು ಹೋಲಿಕೆಯನ್ನು ಹೊಂದಿದೆಯೆಂಬುದೂ, ಕೆಲವು ಜನಾಂಗಗಳವರು ಕೆಲ ಅನುಕೂಲತೆಗಳಿಂದ ಹೆಚ್ಚು ಸುಧಾರಿಸಿದ್ದರೂ ಮೂಲದಲ್ಲಿ ಅವರಿಗೂ ಅನಾಗರಿಕರೆಂದು ಕರೆಯಲ್ಪಡುವ ಜನಾಂಗಗಳವರಿಗೂ ವಿಶೇಷ ಹೆಚ್ಚುಕಡಿಮೆಯಿಲ್ಲವೆಂದು ತಿಳಿಯುವುದು. ಮೂಢನಂಬಿಕೆಗಳ ಅಭ್ಯಾಸದಿಂದಲೂ ಮಹಾಕವಿ ಪಂಪನ “ ಮಾನವ ಜಾತಿ ತಾನೊಂದೆ ವಲಂ ” ಎಂಬ ಮಹಾ ವಾಕ್ಯದ ಸತ್ಯತೆಯು ಅರಿವಾಗುತ್ತದೆ.

# ಸಂದರ್ಭಗ್ರಂಥಗಳು

## ಇಂಗ್ಲಿಷ್


(1) The Golden Bough.
Sir James Frazer (Macmillan & Co. London.)

(2) Manners and Customs of Mankind Vol I.
(Edited by J A. Hammerton.)
(The Amalgamated Press, London.)

(3) The Science of Society. Vol. IV.
(by Summer & Keller & Davie)
(Yale University Press, New Haven.)

(4) Modern Man in Search of a Soul.
(by C. G. Jung; Routledge & Kegan Paul, London.)

(5) The Impact of Science on Society.
(by Bertrand Russel; Allen & Union)

(6) Religious Thought and Life in India.
(by Monier Williams. John Murray, London.)

(7) Lectures on Ethnography.
(L. K. Anantha Krishna Aiyer.
Culcatta University.)

(8) Sceptical Essays.
(George Allen & Unesion.)

(9) **Man on his Nature.**
(by Sir Charles Sherington, Pelican Books.)

(10) **The Devils of Loudun.**
(by Aldous Huxley, Chatto & Windus.)

(11) **Inside Africa.**
(Hemish Hamilton, London.)

(12) **Man the Unknown.**
(by John Gunther; Annelis Carrel, Pelican Books.)

(13) **Patterns of Culture.**
(by Ruth Benedict, Mentor)

**ಕನ್ನಡ**

ಮನೋವಿಶ್ಲೇಷಣಶಾಸ್ತ್ರ
ಪ್ರೊ. ಎಸ್. ಆರ್. ಕುಲಕರ್ಣಿ
ಸ್ವಾಮಿ ಶ್ರೀ ಶಿವಾನಂದತೀರ್ಥ ಟ್ರಸ್ಟ್, ಹರಿಹರ.

# ಉಪನ್ಯಾಸ ಗ್ರಂಥಮಾಲೆ

೧. ಭವಭೂತಿ
ಡಾ. ಕೆ. ಕೃಷ್ಣಮೂರ್ತಿ, ಎಮ್.ಎ.ಬಿ.ಟಿ., ಪಿಎಚ್.ಡಿ.

೨. ಮನೋರೋಗಗಳು
ಪ್ರೊ.ಎನ್.ಆರ್.ಕುಲಕರ್ಣಿ, ಎಮ್.ಎ.ಎಲ್ಎಲ್.ಬಿ.

೩. ಪ್ರಥಮ ಪಂಚವಾರ್ಷಿಕ ಯೋಜನೆ ಹಾಗೂ ಒಕ್ಕಲತನ
ಡಾ. ಎನ್.ಪಿ.ಪಾಟೀಲ, ಬಿ.ಎಸ್.ಸಿ.(ಅಗ್ರಿ.), ಪಿಎಚ್.ಡಿ.

೪. ಗಾದೆಗಳು
ಪ್ರೊ. ಎ. ಕೆ. ರಾಮಾನುಜನ್, ಎಂ.ಎ.

೫. ಭಾರತದಲ್ಲಿ ಜಾತಿಪದ್ಧತಿ
ಡಾ. ವಿಕ್ಟರ ಎಸ್. ಡಿಸೋಜಾ, ಎಂ.ಎ., ಪಿಎಚ್.ಡಿ.

೬. ಮುಂಬಯಿ ಕರ್ನಾಟಕದಲ್ಲಿಯ ಮುಖ್ಯ ಬೆಳೆಗಳನ್ನು ನಾಶಮಾಡುವ ಕೀಟಕ ಪಿಡುಗುಗಳ ಸಮೀಕ್ಷಣೆ
ಪ್ರೊ. ಎಸ್. ಎಸ್. ಕಟಗಿಹಳ್ಳಿಮಠ, ಎಂ.ಎಸ್‌ಸಿ.,

೭. ರಾಜಕೀಯ ಪಕ್ಷಗಳು
ಪ್ರೊ. ಎನ್. ರಾಜಗೋಪಾಲರಾವ್

೮. ಸ್ವಾದಿ ಅರಸುಮನೆತನ
ಪ್ರೊ. ಸ. ಸ. ಮಾಳವಾಡ, ಎಂ.ಎ.

೯. ಮಕ್ಕಳ ಶಿಕ್ಷಣ
ಡಾ. ಡಿ. ಎಸ್. ಕರ್ಕಿ, ಎಂ.ಎ, ಪಿಎಚ್.ಡಿ.

೧೦. ಮೂಢ ನಂಬಿಕೆಗಳು
ಪ್ರೊ. ಎಲ್. ಆರ್. ಹೆಗಡೆ, ಎಂ.ಎ.

ಬೆಲೆ: ಪ್ರತಿ ಒಂದಕ್ಕೆ ೪ ಆಣೆ

## ಇತರ ಪ್ರಕಟನೆಗಳು

1. The Hindu Code Bill Rs. 2
   *—Justice Gajendragadkar*

2. Introduction to Karnatak Mysticism Re. 1
   *—Dr. R. D. Ranade*

3. Selections from the Mahabharata and the Ramayana Rs. 3

4. Pleistocene Studies in the Malaprabha Basin Rs. 13
   *—Dr. R. V. Joshi*

೫. ಕಾವ್ಯಮಂಜರಿ—ಭಾಗ ೧ ರೂ. ೧

೬. ಕಾವ್ಯಮಂಜರಿ—ಭಾಗ ೨ ರೂ. ೧

೭. ಗದ್ಯಮಂಜರಿ ರೂ. ೨

ಕರ್ನಾಟಕ ವಿಶ್ವವಿದ್ಯಾಲಯ

ಧಾರವಾಡ